# ಜಾಗ್ರತಿ

ಅಥವಾ

# ನವಚೇತನ

(ಗಿರಣಿ ಮಜೂರರ ಮುಷ್ಕರದ ನಾಟಕವು.)



**ಸ್ವರ್ಗಸ್ಥ ಮಾಧವ ತಿಂಗಳಾಯರು ಬರೆದುದು.**



ಪ್ರಕಾಶಕರು:

**ಕರ್ಣಾಟಕ ಹಿತೈಷೀ ಕಂಪೆನಿ,**

64, ಕಮಾಕ್ಷಿ ಪಟೇಲ ರಸ್ತೆ, ಮುಂಬಯಿ.







PRINTED AT THE

Saraswathi Printing Works, Ltd., Mangalore.

# ಮುನ್ನುಡಿ.

ಪ್ರಾಚೀನ ಸಾಹಿತ್ಯದಲ್ಲಿ ಮಹಾಪುರುಷರ ಕಷ್ಟ ಸಂಕಷ್ಟಗಳೂ ಅವುಗಳಿಂದ
ಇವರು ಪಾರಾಗಲಿಕ್ಕೆ ಮಾಡಿದ ಸಾಹಸಗಳೂ ಚೆನ್ನಾಗಿ ವರ್ಣಿಸಲ್ಪಟ್ಟಿವೆ. ಸೀತೆಯ
ವನವಾಸ, ಜೀಮೂತವಾಹನನ ತ್ಯಾಗ, ಹರಿಶ್ಚಂದ್ರನ ಸತ್ಯಪರಿಪಾಲನೆ ಇವು
ನಮ್ಮ ಆತ್ಮಶುದ್ಧಿಗೆ ಮಾರ್ಗದರ್ಶಕವೆಂದರೂ ಅಂಥ ಮಹಾ ವ್ಯಕ್ತಿಗಳ ಅಸಾಮಾನ್ಯ
ವಾದ ಮನೋಧೈರ್ಯಕ್ಕೂ ಜನಸಾಮಾನ್ಯರ ಜೀವನಕ್ಕೂ ಸ್ವಲ್ಪವಾದರೂ ಸಂಬಂಧ
ವಿರುವುದಿಲ್ಲ. ಅಂಥ ಆದರ್ಶವ್ಯಕ್ತಿಗಳ ವರ್ತನೆಯು ಅನುಕರಣೀಯವಾದರೂ
ಜನಸಾಮಾನ್ಯರಿಗೆ ದುಸ್ಸಾಧ್ಯವಾಗಿದೆ. ಆದರೆ ಕಷ್ಟ ಪರಂಪರೆಗಳು ಇಂಥ ವ್ಯಕ್ತಿ
ಗಳಿಗೆ ಮಾತ್ರವಲ್ಲ, ಜನಸಾಮಾನ್ಯಕ್ಕೂ ಇವೆ, ಅವುಗಳ ಮೂಲವನ್ನು ಕಿತ್ತೊಗೆಯು
ವುದೇ ಸಮಾಜ ಸುಧಾರಣೆಯ ಮಾರ್ಗ ಎಂಬ ವಿಚಾರವು ಗ್ರಂಥಗಳಲ್ಲಿ ರೂಪು
ಗೊಳ್ಳಲಿಕ್ಕೆ ಪಾಶ್ಚಾತ್ಯ ಸಾಹಿತ್ಯವೇ ದಾರಿ ಮಾಡಿಕೊಟ್ಟಿತು. ಹೀಗೆ ಹುಟ್ಟಿದ
ಗ್ರಂಥಗಳಾದ ದೃಶ್ಯಗಳಲ್ಲಿ ಮೊದಮೊದಲು ಸಮಾಜದಲ್ಲಿರುವ ಬಾಲ್ಯವಿವಾಹ,
ವಿಧವಾ ತಿರಸ್ಕರಣ, ಕನ್ಯಾವರ ಶುಲ್ಕ, ಇತ್ಯಾದಿಗಳ ಖಂಡನೆಯೇ ತೋರಿಬಂದಿತು.
ಸಮಾಜದ ತೀಕ್ಷ್ಣವಾದ ಕಟ್ಟುಗಳನ್ನು ಸಡಲಿಸಿ ಜನಜೀವನವು ಸುಖಕರವಾಗಿ
ಸಾಗುವುದಕ್ಕೆ ಇಂಥ ಗ್ರಂಥಗಳು ಬಹಳ ಮಟ್ಟಿಗೆ ಸಹಾಯಕವಾದವು. ಆದರೆ
ಆರ್ಥಿಕ ಕಷ್ಟಗಳಿಂದ ಜನಸಾಮಾನ್ಯರು ಎಷ್ಟರ ಮಟ್ಟಿಗೆ ಪೀಡಿತರಾಗಿದ್ದಾರೆ,
ಶ್ರೀಮಂತರ, ಭಾಂಡವಲಗಾರರ ಆಶ್ರಯದಿಂದ ಜೀವಿಸಿ ಅರೆಉಪವಾಸದಿಂದ
ಜೀವನ ಕಳೆಯುವ ಬಡಜನರಿಗೆ ಎಂತಹ ಕಷ್ಟಗಳಿವೆ, ಈ ನಿರಾಶ್ರಿತರು ಸಂಘ
ಶಕ್ತಿಯಿಂದ ಏನೇನು ಸಲಕರಣೆಗಳನ್ನು ಸಂಪಾದಿಸಿಕೊಳ್ಳಬಹುದು, ಅವರ
ಜೀವನವನ್ನು ಸೂರೆಗೊಳ್ಳುವ ಜಿಗಳೆಗಳು ಯಾವುವು, ಅವುಗಳ ಕಾಟವನ್ನು
ತಡೆಯುವುದಕ್ಕೆ, ಅವರಲ್ಲಿ ವ್ಯಾಪಿಸಿ ಅವರನ್ನು ನಿಶ್ಚೇತನವಾಗಿ ಮಾಡಿಬಿಟ್ಟಿರುವ
ದುಶ್ಚಾಳಿಗಳನ್ನು ಕಿತ್ತುಹಾಕಲಿಕ್ಕೆ ಬಾಹ್ಯಸಹಾಯವು ಹೇಗೆ ಅಗತ್ಯ, ಅದು ಯಶಸ್ವಿ
ಯಾಗಬೇಕಾದರೆ ಅಂಥ ಜನರಲ್ಲಿ ಹೊಸ ಸ್ಫೂರ್ತಿ ಹೇಗೆ ಉದಯಿಸಬೇಕು,
ಇತ್ಯಾದಿ ವಿಷಯಗಳು ಈ ಚಿಕ್ಕ ನಾಟಕದಲ್ಲಿ ಚೆನ್ನಾಗಿ ವರ್ಣಿತವಾಗಿವೆ.

ಈ ಗ್ರಂಥದಲ್ಲಿ ಮೊದಲು ತೆರೆಯು ಲಕ್ಷ್ಮಣನ ಗುಡಿಸಲನ್ನು ತೋರಿಸುತ್ತದೆ.
ಅದರಲ್ಲಿ ಬಿ. ಎ. ಪಾಸುಮಾಡಿದರೂ ಗಿರಣಿ ಕೂಲಿಗಾರನಾಗಿ ಜೀವನ ನೌಕೆಯನ್ನೇ
ಬಲು ಕಷ್ಟದಿಂದ ಸಾಗಿಸುವ ಚಿತ್ರವನ್ನು ಹೊರಗೆಡವುತ್ತದೆ. ಉಪವಾಸದಿಂದ
ಹೊಟ್ಟೆ ಹಿಸುಕಿ ಅಳುತ್ತಿರುವ ಮಗು, ಅದನ್ನು ಸಂತಯಿಸುವುದಕ್ಕೆ ಯತ್ನಮಾಡುವ

ಲಕ್ಷ್ಮಣ, ರೋಗ ಪೀಡಿತಳಾಗಿ ಬಿದ್ದಿದ್ದ ಹೆಂಡತಿಯ ಚಿತ್ರವು ಹೃದಯ ದ್ರಾವಕ ವಾಗುತ್ತಿದೆ. ಇದರೊಂದಿಗೆನೆ ರಾವ್ ಬಹದ್ದೂರ ಜಗಜೀವನನೆಂಬ ಗಿರಣಿ ಮ್ಹಾಲಿಕನ ಸುಖ ಜೀವನದಲ್ಲಿಯೂ ತೋರುವ ಅಸಂತುಷ್ಟಿಯ ವಿಲಾಸವು ಮನಸ್ಸನ್ನು ಕದಡಿ ಬಿಡುತ್ತದೆ. ಮುಂದಿನ ಚಿತ್ರದಲ್ಲಿ ಗಿರಣೀ ಮಜೂರರ ಸಂಕುಚಿತ ದೃಷ್ಟಿ, ಅವರನ್ನು ಮಧುರಾಕ್ಷಸನ ದವಡೆಯೊಳಗಿಂದ ತಪ್ಪಿಸಲಿಕ್ಕೆ ಸುದರ್ಶನನೆಂಬ ಇನ್ನೊಬ್ಬ ಸುಶಿಕ್ಷಿತ ಮಜೂರನು ಮಾಡುವ ಯತ್ನಗಳ ಪರಿಚಯವಾಗುತ್ತದೆ. ಅದರ ಒತ್ತಿಗೆ ಕುಡಿಕತನದಿಂದ ತನ್ನ ಕಾಲಕಳೆದು, ಗಂಡು ಬೀರಿಯಾದ ತನ್ನ ಹೆಂಡತಿಯ ಹರಿತವಾದ ನಾಲಗೆಯ ಏಟಿಗೆ ಹೆದರಿ ಕಂಗಾಲಾಗುವ ಸಿದ್ಧನನ್ನು ನೋಡಿ ಅವನ ಚಿಕ್ಕ ಮಗನು 'ಅಪ್ಪಾ ನೀನು ಅಮ್ಮನಾಗುವ ಬದಲು ಅಪ್ಪನಾಗು ತಿದ್ದರೆ ಸರಿಬೀಳುತಿತ್ತು' ಎಂದು ನಗುತ್ತ ತಾಯಿಗೆ ಹೇಳಿದ ಮಾತು ನಮ್ಮಲ್ಲಿ ನಗು ವನ್ನು ಹುಟ್ಟಿಸುತಿದ್ದರೂ ತನ್ನ ಮನಸ್ಸನ್ನು ಬಿಗಿ ಹಿಡಿಯದೆ ದುಶ್ಚಾಳಿಗಳಿಗೆ ಬಲಿ ಬಿದ್ದು ಹೇಡಿತನದಿಂದ ಜೀವಿಸುವ ಮೃತಜೀವನದ ಚಿತ್ರವನ್ನು ಸರಿಯಾಗಿ ಚಿತ್ರಿಸಿದೆ. ಇಂಥ ಚಿತ್ರಗಳು ಹಳ್ಳಿಗಳಲ್ಲಿಯೂ ಪೇಟೆಪಟ್ಟಣಗಳಲ್ಲಿಯೂ ನಮ್ಮ ಕಣ್ಣಿಗೆ ಬೀಳದೆ ಇಲ್ಲ. ಅಲ್ಲಿಂದ ವಾಚಕರು ಮಿಲ್ಲಿನ ಮ್ಹಾಲಿಕರ ಸಭೆಯ ದೃಶ್ಯದ ಕಡೆಗೆ ಇಣಿಕಿ ನೋಡಬೇಕಾಗುವುದು. ಇವರಲ್ಲಿ ಅಪರೂಪವಾಗಿ ಒಬ್ಬಿಬ್ಬರು ಬಡ ಕೂಲಿ ಯಾಳುಗಳ ಮೇಲೆ ಕನಿಕರವುಳ್ಳವರು. ಹೆಚ್ಚಿನ ಮಂದಿಗೆ ಈ ಬಡ ಜನರು ಕೀಟಸಮಾನರು. ಅವರ ದುಡಿತದಿಂದ ತಮ್ಮ ದ್ರವ್ಯಭಾಗವು ಹೆಚ್ಚುತ್ತದೆಂದು ವಿವೇಕ ತಾಳುವ ಬದಲಾಗಿ ನ್ಯಾಯವಾದ ಸಲಕರಣೆಗಳನ್ನು ಕೊಡಲಿಕ್ಕೂ ಕೈಚಾಚದೆ ಅವರನ್ನು ತುಳಿದು ಬಿಡುವುದು, ಅದೇ ಕಾಲದಲ್ಲಿ ಗವರ್ನರ ಸಾಹೇಬರಿಗೂ ಎಕ್ಸಿಕ್ಯೂಟಿವ್ ಕೌನ್ಸಿಲರಿಗೂ 'ಪಾರ್ಟಿ'ಗಳನ್ನು ಕೊಡುವುದಕ್ಕೆ ಮುಕ್ತಹಸ್ತದಿಂದ ವಂತಿಗೆ ಕೊಡುವುದೂ, ಅದೇ ಕಾಲದಲ್ಲಿ ತನ್ನ ಹೆಂಡತಿಯ ಮರಣದಿಂದ ಅಧೀರನಾಗಿ ಅವಳ ದಹನಕ್ರಿಯೆಗಾಗಿ ಸ್ವಲ್ಪ ಮುಂಗಡವಾಗಿ ಹಣ ಬೇಡಿ ಬಂದ ಮಜೂರನನ್ನು ಕುರಿತು 'ಪಶುಗಳಂತಿರುವ ನಿಮ್ಮ ಹೆಣವನ್ನು ಸುಡುವ ಬದಲಾಗಿ ಹೊಂಡಮಾಡಿ ಹೂಳಿ ಬಿಡು' ಎಂದು ತಾತ್ಸಾರ ದೃಷ್ಟಿಯಿಂದ ಹೇಳುವುದೂ ಈ ಬಂಡವಾಳಿಗರ ಉದ್ಧಟತನದ ಚಿತ್ರವನ್ನು ಹೊರಗೆಡವುದಲ್ಲದೆ ಅದರಿಂದ ಕಿಚ್ಚೆದ್ದು ಭುಗಿಲೆಂದು ಉರಿಯಬಹುದಾದ ದಾರಿದ್ರ್ಯದ ಬೆಂಕಿಯ ಹೊಗೆ ಏಳುವುದನ್ನು ಸೂಚಿಸುತ್ತದೆ.

ಗಿರಣಿಗಳ ಮೆನೆಜರರಲ್ಲಿ ಎಲ್ಲರೂ ಮಹೇಂದ್ರನಂತಿಲ್ಲ. ಅದರೆ ತೋಟ ಗಳಲ್ಲಿ ಅಥವಾ ಪರದೇಶದಲ್ಲಿ ಕೂಲಿ ಕೆಲಸಕ್ಕಾಗಿ ಮುಂಗಡ ಪಡೆದು ತಂಡ ತಂಡವಾಗಿ ಹೋಗುವ ಕೂಲಿಯಾಳುಗಳ ಮೇಲೆ 'ಕಂಗಣಿಗಳೂ' ಮೆನೆಜರರೂ ನಡಿಸುವ ಅತ್ಯಾಚಾರಗಳು ಅಷ್ಟಿಷ್ಟಲ್ಲ. ಇವರ ದೃಷ್ಟಿಯಲ್ಲಿ ಪರದಾರಾಪಹರಣವು

ಒಂದು ಬಗೆಯ ಹೆಗ್ಗಳಿಕೆಯ ಕಾರ್ಯ. ಆದರೆ 'ತುಳಿದಾಗ ಹುಳುವಾದರೂ ತಿರುಗಿ ಬಿದ್ದು ಕಚ್ಚಿಬಿಡುತ್ತದೆ' ಎಂಬ ಮಾತಿನಂತೆ ಮಹೇಂದ್ರನು ತನ್ನ ಅತ್ಯಾಚಾರಕ್ಕೆ ತಕ್ಕ ಶಿಕ್ಷೆಯನ್ನು ಹೊಂದುತ್ತಾನೆ.

ಇಲ್ಲಿಂದ ಮುಂದೆ ಜಗಜೀವನರಾಯರ ವಿದೇಶಿ ವಸ್ತುಗಳ ಮೇಲಣ ಅಭಿಮಾನ, ಸ್ವದೇಶಿ ವಸ್ತುಗಳ ಮೇಲೆ ತಾತ್ಸಾರ, ನಾಯಿ ಮರಿಯ ಕಾಲ ನೋವನ್ನು ವಾಸಿಮಾಡಿದ್ದಕ್ಕೆ ಡಾಕ್ಟರರಿಗೆ ೧೫೦ ರೂಪಾಯಿ ಪಾರಿತೋಷಕ, ಬಡ ಕೂಲಿಯಾಳಿಗೆ ಅವನ ಹೆಂಡತಿಯ ಜ್ವರದ ಚಿಕಿತ್ಸೆಗೆ ಹಣ ಸಹಾಯಮಾಡಲು ಮುಂದುವರಿಯದ ಮುಕ್ತಾಬಾಯಿ ಮತ್ತು ಜಗಜೀವನರಾಯರ ಹೃದಯ ಕಾಠಿಣ್ಯ ಇವುಗಳೆಲ್ಲ ಲೋಕದ ಚಿತ್ರವನ್ನೇ ಫೊಟೊಗ್ರಾಫ ತೆಗೆದಂತೆ ವರ್ಣಿಸಿವೆ. ಇದರಲ್ಲಿರುವ ವೈಶಿಷ್ಟ್ಯವೇನೆಂದರೆ ಇಂಥ ಕೂಲಿಯಾಳೊಬ್ಬನು ತನ್ನ ಕಷ್ಟಗಳನ್ನು ಸಹಿಸಲಾರದೆ ಜಗಜೀವನರಾಯರ ಕೊಲೆಗೆಳಸಿ, ರಾತ್ರಿಯಲ್ಲಿ ಮನೆ ನುಗ್ಗಿದಾಗ ಅವನ ಸಾಹಸ ಕೃತ್ಯಕ್ಕೆ ಕಾರಣವೇನೆಂದು ಅವನಿಂದ ತಿಳಿದು ಹೃದಯ ಪರಿವರ್ತನೆಯಾದ ಮುಕ್ತಾಬಾಯಿಯು ಕೊನೆಗೆ ವಿದೇಶಿ ವಸ್ತುಗಳಿಗೆ ಬಹಿಷ್ಕಾರ ಹಾಕಿ ಗಿರಣಿ ಮಜೂರರ ಮುಷ್ಕರಕ್ಕೆ ಮುಂದಾಳಾಗಿ ನಿಂತು ಕೂಲಿಗಾರರ ನವಚೇತನದ ಮೂರ್ತಿಯಾಗಿ ಅವರ ಕಷ್ಟ ಪರಂಪರೆಗಳನ್ನು ಹೋಗಲಾಡಿಸುವ ಪ್ರಯತ್ನದಲ್ಲಿ ಯಶಸ್ವಿಯಾಗುವಳು.

ಗಿರಣಿ ಮಜೂರರ ಕಷ್ಟಗಳಿಗಿಂತಲೂ ನಮ್ಮ ದೇಶದ ಹಳ್ಳಿಹಳ್ಳಿಗಳಲ್ಲಿ ಮೃತ ಜೀವನವನ್ನು ಕೈಕೊಂಡಿರುವ ಕೃಷಿಕರ, ಗೇಣಿ ಒಕ್ಕಲುಗಳ ರಕ್ತವನ್ನು ಹೀರಿ ಬಲಿತುಕೊಂಡಿದ್ದು ಅವರನ್ನು ಸರ್ವದಾ ದಾರಿದ್ರ್ಯ ಪಂಕದಲ್ಲಿ ಮುಳುಗಿಸಿ ತಲೆ ಎತ್ತದಂತೆ ಮಾಡಿರುವ ಕಷ್ಟ ಪರಂಪರೆಗಳು ಎಷ್ಟೋ ಇವೆ. ಅವನ್ನೂ ಹೀಗೆಯೇ ಜನತೆಯ ಕಣ್ಣ ಮುಂದೆ ತಂದೊಡ್ಡಿ ಈ ಬಗೆಯ ದಾರಿದ್ರ್ಯ ಪೀಡಿತರ ಆರ್ಥಿಕ ಸ್ಥಿತಿಯನ್ನು ಸುಧಾರಿಸುವ ಯತ್ನಕ್ಕೆ ಈ ಗ್ರಂಥವು ದಾರಿ ಕಡಿದು ಕೊಟ್ಟೀತೆಂದು ನನ್ನ ಭರವಸೆ.

ಈ ಗ್ರಂಥಕಾರರು ಇಷ್ಟು ಎಳೆ ಪ್ರಾಯದಲ್ಲಿ ಇಂಥ ಗ್ರಂಥವನ್ನು ಬರೆಯ ಲಿಕ್ಕೆ ಉದ್ಯುಕ್ತರಾದರು ಎಂದು ನನಗೆ ತುಂಬಾ ಸಂತೋಷವಿತ್ತು. ಇಂಥ ಹಲವು ಗ್ರಂಥಗಳು ಅವರ ಲೇಖನಿಯಿಂದ ಹುಟ್ಟಿಬರುವವೆಂದೂ ನನಗೆ ಭರವಸೆ ಇತ್ತು. ಆದರೆ 'ವಿಧಿಯು ಮಾತ್ರ ಬೇರೊಂದೆಣಿಸಿತು'.

ಉಳ್ಳಾಲ ಮಂಗೇಶರಾಯ.



# ಮಾಧವ ತಿಂಗಳಾಯರ ಜೀವನ ಸ್ಮರಣೆ.

---

ದಿವಂಗತ ಮಾಧವ ತಿಂಗಳಾಯರು ಮಂಗಳೂರಿನ ಮೊಗವೀರ ಜಾತಿಯ ಒಂದು ಕುಲೀನ ಕುಟುಂಬದಲ್ಲಿ ಜನ್ಮವೆತ್ತಿದರು. ಇವರ ತಂದೆ ಕರಿಯದಣ್ಣನವರು ಮತ್ಸ್ಯ ವ್ಯವಸಾಯಿಗಳು. ಆದರೆ, ಚಿಕ್ಕಂದಿನಲ್ಲೇ ತಾಯಿಯನ್ನು ಕಳಕೊಂಡ ಇವರು ತಮ್ಮ ಮಾವ ಕೃಷ್ಣಪ್ಪ ತಿಂಗಳಾಯರ ಹಾಗೂ ಅಜ್ಜ ಮೋಹನಪ್ಪ ತಿಂಗಳಾಯರ ಪೋಷಣೆಯಲ್ಲಿ ಬೆಳೆದರು. ಕೃಷ್ಣಪ್ಪ ತಿಂಗಳಾಯರು ತಾವು ಸ್ವತಃ ಉತ್ತಮ ನಟರಾಗಿದ್ದು ಕೆಲವೊಂದು ಕಾಲ ಒಂದು ನಾಟಕ ಮಂಡಳಿಯನ್ನು ಕೂಡಾ ನಡಿಸಿದ್ದರು. ಮೋಹನಪ್ಪ ತಿಂಗಳಾಯರು ಆರ್ಯಸಮಾಜದ ತತ್ವಗಳನ್ನು ಸ್ವೀಕರಿಸಿ ತಮ್ಮ ಮೊಗವೀರ ಜಾತಿಯಲ್ಲಿ ರೂಢಿಯಲ್ಲಿರುವ ಮದ್ಯಪಾನ, ಪ್ರಾಣಿಬಲಿ, ಭೂತಾರಾಧನೆ, ಇತ್ಯಾದಿಗಳನ್ನು ದೂರೀಕರಿಸುವ ಸುಧಾರಣಾಕಾರ್ಯವನ್ನು ಈಗಲೂ ಮಾಡುತ್ತಿದ್ದಾರೆ. ಮಂಗಳೂರು ಹೊಯಿಗೆ ಬಜಾರದಲ್ಲಿರುವ ಶ್ರೀ ಜ್ಞಾನೋದಯ ಸಮಾಜವೇ ಅವರ ಸತತ ಪರಿಶ್ರಮದ ಫಲವು. ತನ್ನ ಮಾವನ ಕಲಾಪ್ರೇಮ ಹಾಗೂ ಅಜ್ಜನ ಧರ್ಮಪ್ರೇಮ ಇವೆರಡೂ ಮಾಧವ ತಿಂಗಳಾಯರಲ್ಲಿ ಪೂರ್ಣವಾಗಿ ವಿಕಾಸ ಹೊಂದಿದ್ದುವು.

ಅತೀ ಚಿಕ್ಕ ವಯಸ್ಸಿನಲ್ಲೇ ಅವರು ತನ್ನ ಮಾವನಿಂದ ಅಭಿನಯದ ಶ್ರೀ ಗಣೇಶವನ್ನು ಪಡೆದು ರಂಗಭೂಮಿಯ ಸೇವೆಯಲ್ಲಿ ತೊಡಗಿದರು. ಸುರಮ್ಯ ಸಂಗೀತ, ಸರಳ ವಾಕ್ಚಾತುರ್ಯ, ಸುಂದರ ಅಭಿನಯ ಮುಂತಾದ ನಟನಲ್ಲಿರಬೇಕಾದ ಎಲ್ಲಾ ಗುಣಗಳೂ ಅವರಲ್ಲಿ ಮೂರ್ತಿಮಂತವಾಗಿದ್ದು ಪ್ರೇಕ್ಷಕರ ಹೃದಯವನ್ನು ಸೂರೆಗೊಳ್ಳುತ್ತಿದ್ದುವು.

ಇವರು ತಮ್ಮ ಹೈಸ್ಕೂಲ್ ವಿದ್ಯಾಭ್ಯಾಸವನ್ನು ಮಂಗಳೂರಿನ ಗವರ್ನಮೆಂಟ್ ಕೋಲೆಜಿನಲ್ಲಿ ಮುಗಿಸಿದರು. ವಿದ್ಯಾರ್ಥಿಯಾಗಿರುವಾಗಲೂ ಅವರ ಮುಖದ ಸೌಜನ್ಯ, ಕಣ್ಣುಗಳಲ್ಲಿ ಕಾಣುತ್ತಿದ್ದ ಆಕರ್ಷಕ

ವಿಚಾರಶೀಲತೆ ಇವುಗಳಿಂದ ಅವರು ಎಲ್ಲರ ಪ್ರೀತಿಗೆ ಪಾತ್ರರಾಗಿದ್ದರು. ವಿದ್ಯಾರ್ಥಿ ಜೀವನವಲ್ಲಿ ಕೂಡ ಅವರಲ್ಲಿ ಎಂತಹ ಸೌಮ್ಯತೆ ಇದ್ದಿತೆಂದರೆ ಅವರು ಒಮ್ಮೆಯಾದರೂ ಯಾರೊಡನೆಯೂ ಜಗಳಾಡಿದವರಲ್ಲ!

ಸಮಾಜಸುಧಾರಣೆಯಲ್ಲಿ ಇವರಿಗೆ ತುಂಬಾ ಅಸಕ್ತಿಯಿತ್ತು. ಜ್ಞಾನೋದಯ ಸಮಾಜಮಂದಿರದಲ್ಲಿ ಆಗಾಗ ಕೂಡುತ್ತಿದ್ದ ಮೊಗವೀರ ಜಾತಿಕೂಟದಲ್ಲಿ ಇವರು ಜಾತಿರೂಢಿಗಳ ದುಷ್ಪರಿಣಾಮಗಳನ್ನು ತೋರಿಸುವ ತುಳು ನಾಟಕಗಳನ್ನು ಬರೆದು ಆಡಿತೋರಿಸುತ್ತಿದ್ದರು. ಜನಮರ್ಲ್ (ಜನ ಮರುಳು) ಧರ್ಮದ ಉದಲ್ (ಧರ್ಮದ ಗೆದ್ದಲು) ಬದಿ ರಕ್ಕಸೆ (ವರದಕ್ಷಿಣೆ ರಾಕ್ಷಸ) ವೆಂಬ ಸಾಮಾಜಿಕ ನಾಟಕಗಳೂ ಪ್ರೇಮ ಪೂರ್ಣಿಮಾ, ಪತಿತೋದ್ಧರಣವೆಂಬ ಚಾರಿತ್ರಿಕ ನಾಟಕಗಳೂ ಇವರಿಂದ ಜ್ಞಾನೋದಯ ಸಮಾಜ ಮಂದಿರದಲ್ಲಿ ಬರೆದು ಅಭಿನಯಿಸಲ್ಪಟ್ಟವುಗಳು. ಇವರ ಈ ರೀತಿಯ ಪರಿಶ್ರಮದಿಂದ ಮೋಹನಪ್ಪ ತಿಂಗಳಾಯರ ಸಮಾಜಸುಧಾರಣಾಕಾರ್ಯಕ್ಕೆ ತುಂಬಾ ಸಹಾಯವಾಗುತ್ತಿತ್ತು. ಈ ನಾಟಕಗಳಲ್ಲಿನ ಸ್ವಾಭಾವಿಕತೆ ಹಾಗೂ ಹಳ್ಳಿಯ ಜೀವನ ಚಿತ್ರಗಳು ಎಲ್ಲರ ತಲೆಯನ್ನೂ ತೂಗಿಸುತ್ತಿದ್ದುವು. ಆದರೆ, ಈ ನಾಟಕಗಳು ತುಳುವಿನಲ್ಲಿ ಬರೆದು ಜಾತಿಬಾಂಧವರಿಗಾಗಿ ಮಾತ್ರ ಅಭಿನಯಿಸಲ್ಪಡುತ್ತಿದ್ದುದರಿಂದ, ಇವರ ಕಾರ್ಯ ಪ್ರಚಾರವು ಎಲ್ಲಾ ಜನರಲ್ಲಿ ಆಗಲಿಲ್ಲ.

ಮಂಗಳೂರ ಜನರಿಗೆ ಇವರ ಅಭಿನಯ ಚಾತುರ್ಯದ ಅರಿವುಂಟಾದುದು ಸೇವಾದಳ ನಾಟಕಮಂಡಳಿಯು ಸ್ಥಾಪಿತವಾದಾಗ. ರಂಗಭೂಮಿಯ ಮೂಲಕ ಸಮಾಜಸೇವೆ ಮಾಡಬೇಕೆಂಬ ಧ್ಯೇಯದಿಂದ ಈ ನಾಟಕ ಮಂಡಳಿಯು ಕೆಲವು ಯುವಕರಿಂದ ಸ್ಥಾಪಿಸಲ್ಪಟ್ಟು ೧೯೩೦ನೇ ದಶಂಬರ ೬ನೇ ದಿನ ಅವರು ರವೀಂದ್ರನಾಥ ಠಾಕೂರರ ಇಂಗ್ಲೀಷ್ ಸೆಕ್ರಿಫೈಸ್ ನಾಟಕದ ಆತ್ಮ ಸಮರ್ಪಣೆಯೆಂಬ ಕನ್ನಡ ರೂಪಾಂತರವನ್ನು ಆಡಿತೋರಿಸಿದರು. ಅದರಲ್ಲಿ ಮಾಧವ ತಿಂಗಳಾಯರು ರಾಣಿ ಗುಣವತಿಯ ಪಾತ್ರವನ್ನು ವಹಿಸಿದ್ದರು. ಆ ನಾಟಕವು ಮಂಗಳೂರು ನಿವಾಸಿಕರ

ಹೃದಯದಲ್ಲಿ ಚಿರಸ್ಮರಣೀಯವಾದುದು. ಗುಣವತಿಯ ಪ್ರೇಮ ಸನ್ನಿವೇಶ, (love-scene) ದುಃಖದ ಅಭಿನಯ ಇವನ್ನು ನೋಡಿದವರು ಎಂದಿಗೂ ಮರೆಯುವಂತಿಲ್ಲ. ಇವರ ಅಭಿನಯವನ್ನು ಕಂಡವರು ಇವರು ಬದುಕಿ ಉಳಿದರೆ, ಮಹಾರಾಷ್ಟ್ರದ ಸುಪ್ರಸಿದ್ಧ ಸ್ತ್ರೀ ನಟರಾದ ಬಾಲ ಗಂಧರ್ವ, ದೀನನಾಥರನ್ನೂ ಹಿಂದೆಹಾಕುವರೆಂದು ಅಭಿಪ್ರಾಯ ಪಡುತ್ತಿದ್ದರು. ಆದರೆ, ಕರ್ನಾಟಕ ಮಾತೆಯ ದುರ್ದೈವ!

ಸೇವಾದಳ ನಾಟಕಮಂಡಳಿಯ ದ್ವಿತೀಯ ನಾಟಕವೆಂದರೆ ಇದೇ ನವಚೇತನ ಅಥವಾ ಜಾಗ್ರತಿ. ಜನಜೀವನವನ್ನು ಯಥಾರ್ಥವಾಗಿ ಚಿತ್ರಿಸುವ ನಾಟಕಗಳು ಕನ್ನಡದಲ್ಲಿ ತೀರಾ ಕೆಲವೇ ಇದ್ದು ಅವುಗಳಲ್ಲಿ ಕೂಡಾ ಹೆಚ್ಚಿನವು ಅಭಿನಯಿಸಲು ಅಯೋಗ್ಯವಾದುವುಗಳಾದುದರಿಂದ ರಂಗಭೂಮಿಯ ಮೂಲಕ ಸಮಾಜಸೇವೆಯು ಸ್ವಲ್ಪ ಮಟ್ಟಿಗೆ ದುರ್ಗಮವೆಂದೇ ಹೇಳಬೇಕು. ಸೇವಾದಳ ಮಂಡಳಿಗೆ ಅನುಕೂಲ ನಾಟಕಗಳ ಅಭಾವವನ್ನು ದೂರೀಕರಿಸುವುದಕ್ಕಾಗಿಯೇ ಮಾಧವ ತಿಂಗಳಾಯರು ಕನ್ನಡ ನಾಟಕಗಳನ್ನು ಬರೆಯುವ ನಿರ್ಧಾರ ಮಾಡಿದರು. 'ಜಾಗ್ರತಿ'ಯು ನಾಟಕ ಚಾಲಕರ ದೃಷ್ಟಿಯಿಂದ ಯಶಸ್ವಿಯಾದ ನಾಟಕವು. ಹಾಗೂ ಪ್ರಸ್ತುತ ಜನಜೀವನದ ಒಂದು ಸಮಸ್ಯೆಯನ್ನು ಬಿಡಿಸುವ ಕಥಾವಸ್ತು (plot) ಉಳ್ಳದ್ದು. ಕೂಲಿಕಾರ, ಭಾಂಡವಲಗಾರ ಪ್ರಶ್ನೆಯು ಕರ್ನಾಟಕದಲ್ಲಿ ಘೋರರೂಪವನ್ನು ತಾಳದಿದ್ದರೂ, ಬೆಂಗಳೂರಿನ ಅರಿವೆ ಗಿರಣಿಗಳಲ್ಲೂ ಮಂಗಳೂರಿನ ಹಂಚುಕಾರ್ಖಾನೆಗಳಲ್ಲೂ ಅದರ ಆರಂಭವಾಗಿದೆ ಯೆಂಬುದು ನಿರ್ವಿವಾದ. 'ಕೂಲಿಕಾರ ಭಾಂಡವಲಗಾರರ ಐಕ್ಯವನ್ನು ಸ್ಥಾಪಿಸೋಣ' ಎಂಬ ಜಗಜೀವನನ ಕೊನೆಯ ಮಾತೇ ನಾಟಕಕಾರನ ಧ್ಯೇಯವನ್ನು ವಿಶದಗೊಳಿಸುತ್ತದೆ. ಐಕ್ಯಕ್ಕೆ ಕಾರಣೀಭೂತವಾದ ಹೃದಯ ಪರಿವರ್ತನೆಯು ಹೇಗೆ ಕೈಗೂಡಿತೆಂಬುದು ನಾಟಕದಲ್ಲಿ ಕಂಡು ಬರುವುದು.

ಜಾಗ್ರತಿ ನಾಟಕವು ತಾ. ೮—೩—'೩೪ನೇ ದಿನ ಮಂಗಳೂರಲ್ಲಿ ಅತ್ಯಂತ ಯಶಸ್ವಿಯಾಗಿ ಅಭಿನಯಿಸಲ್ಪಟ್ಟಿತು. ಮಾಧವ ತಿಂಗಳಾಯರ

ಮುಕ್ತಿಯು ಭೂಮಿಕೆಯು ಜನರನ್ನು ಮುಗ್ಧಗೊಳಿಸಿತು. ಹರಕು ಚಿಂದಿ ಯುನ್ನುಟ್ಟು ಗಂಡನೊಡನೆ ಬಡವರ ಪ್ರಾಣದಾನವನ್ನು ಬೇಡುವ ದೃಶ್ಯ ದಲ್ಲಿ ಅವರ ಅಭಿನಯವನ್ನು ನೋಡಿ ಕಣ್ಣೀರು ಸುರಿಸದವರಿಲ್ಲ.

ಈ ನಾಟಕವು ಇನ್ನೊಂದು ದೃಷ್ಟಿಯಿಂದ ಅಭಿನಂದನೀಯವು. ಯಾಕೆಂದರೆ, ಈ ನಾಟಕದಲ್ಲಿ ಹರಿಜನರೂ ಪಾತ್ರ ವಹಿಸಿದ್ದರು. ಹರಿ ಜನರಿಗೆ ಪ್ರೇಕ್ಷಕರಾಗಿ ಸಹ ಮಂಗಳೂರಲ್ಲಿ ನಾಟಕಗೃಹಗಳಲ್ಲಿ ಪ್ರವೇಶ ವಿಲ್ಲದಿರುವಾಗ, ಅವರನ್ನು ಸವರ್ಣೀಯರೊಡನೆ ರಂಗಭೂಮಿಗೆ ತಂದು ಸರ್ವರೂ ಒಟ್ಟಾಗಿ ಅಭ್ಯಾಸದಲ್ಲೂ ಉಪಹಾರದಲ್ಲೂ ಇತರ ಎಲ್ಲಾ ವಿಷಯಗಳಲ್ಲೂ ಭೇದವಿಲ್ಲದೆ ಸಹಕರಿಸುವಂತೆ ಮಾಡಿದ ಮಾಧವ ತಿಂಗ ಳಾಯರ ಕೆಲಸವು ಸಮಾಜಸುಧಾರಣೆಯಲ್ಲಿ ಅವರ ಕಾರ್ಯತತ್ಪರತೆ ಯನ್ನು ವ್ಯಕ್ತಗೊಳಿಸುತ್ತದೆ. ಜನ್ಮಾಂತ್ಯದಲ್ಲಿ ನಾಟ್ಯಕಲೋಪಾಸಕರಾದ ಅವರು ರಂಗಭೂಮಿಯ ಮುಖಾಂತರ ಹರಿಜನಸೇವೆಯನ್ನೂ ಮಾಡಿದರು.

ಮಾಧವ ತಿಂಗಳಾಯರ ಇತರ ಸಾಹಿತ್ಯಸೇವೆಯ ಕೆಲಸಗಳೆಂದರೆ ಅವರು ಮೊಗವೀರ ಯುವಕರ ಸಹಾಯದಿಂದ ನಡೆಸುತ್ತಿದ್ದ 'ವಿದ್ಯಾರ್ಥಿ' ಎಂಬ ಕೈಬರಹದ ಮಾಸಪತ್ರಿಕೆ. ಅದರಲ್ಲಿ ಅವರು ಬಿಡಿಸುತ್ತಿದ್ದ ವ್ಯಂಗ್ಯ ಚಿತ್ರಗಳು ತುಂಬಾ ಪರಿಣಾಮಕಾರಿ ಹಾಗೂ ಶ್ಲಾಘನೀಯವಾಗಿದ್ದುವು. 'ಕಂಠೀರವ' ಆಫೀಸಿನಲ್ಲಿದ್ದಾಗ 'ಚಂದ್ರಗುಪ್ತ' ಎಂಬ ಗುಪ್ತನಾಮದಿಂದ ಆಗಾಗ ಸಣ್ಣ ಕತೆಗಳನ್ನು ಕಂಠೀರವದಲ್ಲಿ ಬರೆಯುತ್ತಿದ್ದರು.

೧೯೩೦ನೇ ಸತ್ಯಾಗ್ರಹ ಸಮರದಲ್ಲಿ ಇವರು ವಿದ್ಯಾರ್ಥಿಯಾಗಿರು ವಾಗಲೇ ಒಂದೆರಡು ಸಾರೆ ಲಾಠಿ ಹೊಡೆತವನ್ನು ತಿಂದುದಲ್ಲದೆ ಸರ ಕಾರದಿಂದ ನಿಷೇಧಿಸಲ್ಪಟ್ಟ ಜಿಲ್ಲಾ ಪರಿಷತ್ತಿನಲ್ಲಿ ಭಾಗವಹಿಸಿ ಅವರ ಮೇಲೆ ಖಟ್ಲೆ ಕೂಡಾ ಆಗಿತ್ತು. ಆದರೆ, ಎಳೆ ವಯಸ್ಸಿನವರೆಂದು ಅವ ರನ್ನು ಬಿಡುಗಡೆ ಮಾಡೋಣಾಯಿತು.

ಮೆಟ್ರಿಕ್ ಆದ ನಂತರ ವೈದ್ಯಕೀಯ ಶಿಕ್ಷಣಕ್ಕಾಗಿ ಮದ್ರಾಸಿಗೆ ಹೋಗಿದ್ದರೂ ಆ ವಾತಾವರಣವು ಅವರ ಚಟುವಟಿಕೆಗಳಿಗೆ ಸರಿಬೀಳದೆ ಪುನಃ ಮಂಗಳೂರಿಗೆ ಮರಳಿ 'ಕಂಠೀರವ'ವು ಮುದ್ರಿಸಲ್ಪಡುವ ಸರಸ್ವತಿ

ಮುದ್ರಾಶಾಲೆಯಲ್ಲಿ ಕೆಲಸಕ್ಕೆ ಸೇರಿಕೊಂಡರು. ಮುದ್ರಾಶಾಲೆಯನ್ನು ಸೇರಿದ ಮೂರು ನಾಲ್ಕು ತಿಂಗಳಲ್ಲೇ ತನ್ನ ಸದ್ಗುಣಗಳಿಂದ ಮಾಲಕ ರಿಂದ ಸಿಪಾಯಿಯ ವರೆಗೂ ಎಲ್ಲರ ಪ್ರೇಮವನ್ನು ಸಂಪಾದಿಸಿದ್ದರು.

ಕಡೆಗೆ ಇವರು ಎರಡು ತಿಂಗಳ ವರೆಗೆ ಸನ್ನಿಪಾತಜ್ವರದಿಂದ ಪೀಡಿತ ರಾಗಿ ಮನುಷ್ಯ ಪ್ರಯತ್ನಗಳೆಲ್ಲವೂ ನಿಷ್ಫಲವಾಗಿ ರುಗ್ಣಶಯ್ಯೆಯಲ್ಲೂ 'ನಾಟಕ, ಪುಸ್ತಕ' ಇವೆರಡು ವಿಷಯಗಳನ್ನು ಚಿಂತಿಸುತ್ತಾ ಕಳೆದ ಭಾದ್ರ ಪದ ಶುಕ್ಲಪಕ್ಷ ಬಿದಿಗೆಯ ದಿನ ತನ್ನ ಇಪ್ಪತ್ತೊಂದನೇ ವಯಸ್ಸಿನಲ್ಲಿ ಅಕಾಲ ಮರಣಕ್ಕೆ ತುತ್ತಾದರು.

ತುಳು ನಾಟ್ಯಲೇಖನ ಅಭಿನಯಗಳಿಂದ ಮೊಗವೀರ ಜಾತಿಯನ್ನು ಹೊಡೆದೆಬ್ಬಿಸಿ ಅವರಿಗೆ ಉನ್ನತಿಯ ದಾರಿಯನ್ನು ತೋರಿಸಿದ ಮಾಧವ ತಿಂಗಳಾಯರು ಅದೇ ರೀತಿ ಅಖಿಲ ಕರ್ನಾಟಕದ ಸೇವೆಯನ್ನು ಮಾಡುವ ರೆಂದು ಆಶಿಸಿದ್ದೆವು. ಆದರೆ, ನಿರ್ಭಾಗ್ಯಳಾದ ಕನ್ನಡಮಾತೆಗೆ ತನ್ನಲ್ಲಿ ಅವನನ್ನು ದೀರ್ಘಕಾಲ ಇರಿಸಿಕೊಳ್ಳುವ ಅದೃಷ್ಟವಿರಲಿಲ್ಲ. ಉದಯೋ ನ್ಮುಖ ತಾರೆಯು ಪ್ರಥಮಕಿರಣಗಳನ್ನು ಭೂಮಿಯ ಮೇಲೆ ಪಸರಿಸು ವಷ್ಟರಲ್ಲೇ ಅಸ್ತಂಗತವಾಯಿತು.

ಅವನು ಬದುಕಿರುತ್ತಿದ್ದರೆ . . . . ! ಮನುಷ್ಯರನ್ನು ಶೋಕದಲ್ಲಿ ಮುಳುಗಿಸುವ ಶಬ್ದಗಳಲ್ಲಿ ಅತ್ಯಂತ ಶೋಚನೀಯ ಶಬ್ದವಿದು. ಅವನು ಬದುಕಿರುತಿದ್ದರೆ? ಅವನು ಬದುಕಿರುತಿದ್ದರೆ ಅವನ ಅಭಿನಯದ ಸವಿ ಯನ್ನು ಕನ್ನಡಿಗರು ಉಣ್ಣುತ್ತಿದ್ದರು. ಅವನು ಬದುಕಿಲ್ಲ . . . . ಆದರೆ, ನಮ್ಮ ಸಾಹಿತಿಗಳಿಗೆ, ನಾಟಕಕರ್ತರಿಗೆ ಒಂದು ಸೂಚನೆಯನ್ನು ಕೊಟ್ಟು ಹೋದನು. ಬಾಲಕ ಮಾಧವನ ಜೀವನಧ್ಯೇಯವನ್ನು ನಮ್ಮ ಸಾಹಿತಿ ಗಳು ಸ್ವೀಕರಿಸಿದರೆ, ಅವನ ಜನ್ಮವು ಸಫಲವಾಗುವುದು. ಪುನರ್ಜನ್ಮ ವಿದ್ದರೆ, ಅವನು ಬೇಗನೆ ಕನ್ನಡಮಾತೆಯುದರದಲ್ಲೇ ಜನಿಸುವನು . . . . ಅವನ ಕಾರ್ಯವು ಮುಗಿದಿಲ್ಲ.

---



ಶ್ರೀ। ಮಾಧವ ತಿಂಗಳಾಯರು.

# ನಿವೇದನ.

'ಜಾಗ್ರತಿ'ಯು ರಂಗಭೂಮಿಯಲ್ಲಿ ಜನರ ಮೆಚ್ಚುಗೆಯನ್ನು ಪಡೆದು ಅದನ್ನು ಮುದ್ರಿಸುವ ಸುಯೋಗವು ಬಂದಾಗ ಸಮಗಾದ ಆನಂದವು ಮುದ್ರಣವು ಮುಗಿಯುವುದರೊಳಗಾಗಿ ಅಗಾಧಶೋಕದಲ್ಲಿ ಕೊನೆ ಗಾಣುವುದೆಂದು ಯಾರು ತಾನೇ ಎಣಿಸಿದ್ದರು!

ಹೂಗಿಡದ ಮೊದಲಮೊಗ್ಗೆಯು ಅರಳಿ ಅದರ ಸುವಾಸನೆಯು ನಾಲ್ಕೂ ಕಡೆಗೆ ಹಬ್ಬುವಷ್ಟರಲ್ಲೇ ಗಿಡವು ಕರಾಳ ಕಾಲನ ಕೈಗೆ ಸಿಕ್ಕಿ ಕರಟಿಹೋಯಿತು. ಈ ಪುಸ್ತಕವು ಮುದ್ರಾಶಾಲೆಯಿಂದ ಹೊರಬೀಳುವ ಮೊದಲೇ ಮಾಧವನು ಇಹವ್ಯಾಪಾರವನ್ನು ಮುಗಿಸಿದನು. ಅವನ ಕೃತಿ ಯನ್ನು ವಾಚಕರ ಮುಂದಿಡುವ ಭಾರವು ನನ್ನ ಪಾಲಿಗೆ ಬಂದಿತು.

ನಮ್ಮೀರ್ವರಲ್ಲಿ ಒಬ್ಬರ ಜೀವನದಲ್ಲಿನ್ನೊಬ್ಬರು ವಿಶಿಷ್ಟಸ್ಥಾನವನ್ನು ಪಡೆದಿದ್ದರು. ಅವನ ತುಳು ನಾಟಕಗಳ ಅಭಿನಯದಿಂದ ಮೊಗವೀರ ಜಾತಿಯಲ್ಲಾದ ಪರಿಣಾಮವನ್ನು ನೋಡಿ, ಈ ಹೂಗಿಡದ ಸುವಾಸನೆ ಯನ್ನು ಸ್ವೀಕರಿಸಲು ಕನ್ನಡಿಗರೆಲ್ಲರೂ ಅರ್ಹರಾಗಬೇಕೆಂದು ಅವನನ್ನು ಕನ್ನಡ ನಾಟಕ ಲೇಖನದ ಉದ್ಯಮಕ್ಕೆ ಪ್ರಥಮತಃ ಹಚ್ಚಿದವನು ನಾನು. ಸೇವಾದಳ ನಾಟಕ ಮಂಡಳಿಯು ಸ್ಥಾಪಿಸಲ್ಪಟ್ಟ ನಂತರ, ನಾಟ್ಯ ಕಲೋಪಾಸನೆಯಲ್ಲಿ ನಾವಿಬ್ಬರು ಭಾಗಿಗಳಾಗಿ ವಿಚಾರ ಉದ್ದೇಶಗಳ ಸಮ್ಮಿಳನದಿಂದ ಜೀವನಪಥದಲ್ಲಿ ಕೈಕೈಹಿಡಿದೆಂಬಂತೆ ಒಟ್ಟಿಗೆ ಸಾಗಿದೆವು. 'ಜಾಗ್ರತಿ' ನಾಟಕ ಬರೆಯುವಾಗ, ಕಥೆಯ ಹಾಗೂ ಪಾತ್ರಗಳ ವಿಷಯ ಚರ್ಚಿಸುತ್ತಾ ನಾವು ಎಷ್ಟೊ ತಾಸುಗಳನ್ನು ಕಳೆದಿದ್ದೆವು, ಮುಂದಿನ ಕಾರ್ಯದ ಕನಸನ್ನು ಕಂಡಿದ್ದೆವು. ಮಾಧವನು ಇದು ಪ್ರಕಟವಾದೊಡನೆ ಹರಿಜನೋದ್ಧಾರದ ಕುರಿತು ನಾಟಕ ಬರೆಯಬೇಕೆಂದಿದ್ದನು.

ಆದರೆ, ವಿಧಾತನ ಸೃಷ್ಟಿಕ್ರಮದಲ್ಲಿ ಅವನ ಕೆಲಸವು ಇಲ್ಲಿಗೆ ಮುಗಿಯುವಂಥಾದ್ದಿತ್ತು. ಅಂತೆಯೇ ನಾವು ಮಾಧವನನ್ನು ಕಳೆ

ಕೊಂಡೆವು. ಅವನ ಅಗಲುವಿಕೆಯಿಂದ ನನ್ನ ಮನಸ್ಸಿನಲ್ಲಾದ ಶೂನ್ಯತೆಯು ಇನ್ನು ಯಾರಿಂದಲೂ ಯಾತರಿಂದಲೂ ತುಂಬಲಾರದು; ಇಂದು ಸೇವಾದಳ ಮಂಡಳಿಯು ಸ್ಫೂರ್ತಿಗೊಳಿಸಿ ಕಾರ್ಯಕ್ಕೆ ಹಚ್ಚುವ ಪತ್ನಿಯನ್ನು ಕಳಕೊಂಡ ವಿಧುರನಂತಾಗಿದೆ.

ಈ ನಾಟಕ ಪ್ರಕಟನೆಯು ಮಿತ್ರನ ಪೂಜ್ಯ ನೆನಪನ್ನು ಸ್ಮರಿಸಿ ಮಾಡುವ ಅಲ್ಪಕಾರ್ಯವು. ಇದು ಜನಪ್ರೀತವಾಗಿ ನಾಟ್ಯಕಲೋಪಾಸಕರ ಶ್ಲಾಘನೆಯನ್ನು ಪಡೆಯುವುದೆಂದು ಭರವಸೆ ಇದೆ.

ಇನ್ನು ಕೊನೆಯ ಮಾತು. ಈ ನಾಟಕಕ್ಕೆ ಪದಮಾಡಿಕೊಟ್ಟ ಲಲಿತ ಕಲಾದರ್ಶ ಸಂಗೀತ ಶಾಲೆಯ ಮಾಸ್ತರ ನಾರಾಯಣರಾಯರಿಗೂ ಮುನ್ನುಡಿಯನ್ನು ಬರೆದ ಟ್ರೈನಿಂಗ್ ಶಾಲಾ ನಿವೃತ್ತ ಹೆಡ್‌ಮಾಸ್ತರ ಉಳ್ಳಾಲ ಮಂಗೇಶ ರಾಯರಿಗೂ ಮುಖಚಿತ್ರ ಬರೆದ ಕಮಲಾ ಬಾಯಿಯವರಿಗೂ ಪುಸ್ತಕವನ್ನು ಮುದ್ದಾಗಿ ಮುದ್ರಿಸಿದ ಸರಸ್ವತಿ ಪ್ರಿಂಟಿಂಗ್ ವರ್ಕ್ಸ್‌ರವರಿಗೂ ಕೇವಲ ತಾಯ್ನುಡಿಯ ಸೇವೆಯಿಂದ ಪ್ರೇರಿತರಾಗಿ ಲಾಭ ನಷ್ಟ ಲೆಕ್ಕಿಸದೆ ಪ್ರಕಟಿಸಲೊಪ್ಪಿದ ಕರ್ನಾಟಕ ಹಿತೈಷಿ ಕಂಪೆನಿ ಮುಂಬಯಿ, ಇವರಿಗೂ ವಂದನೆಗಳು.

ದೀವಳಿಗೆ ಹಬ್ಬದ ದಿನ.
ತಾ. 6—11—'34

ಇತಿ, ಕನ್ನಡ ನಾಡಿನ ಅಡಿಯಾಳು,
**ರಂಗರಾವ ತಲಚೇರಿಕರ.**

# ಪಾತ್ರ ವರ್ಗ.

---

ತಾರೀಕು ೮—೩—೧೯೩೪ನೇ ದಿನ ಸೇವಾದಳ **ನಾಟಕ** ಮಂಡಳಿಯವರು ಈ ನಾಟಕವನ್ನು ಮೊದಲನೇ ಬಾರಿ ಆಡಿ ತೋರಿಸಿದಾಗ ಪಾತ್ರವಹಿಸಿದವರು.

| | |
|---|---|
| **ಜಗಜೀವನ ಶೇಟ್** | ರಂಗರಾವ ತಲಚೇರಿಕರ ಬಿ. ಎ., ಎಲ್. ಎಲ್. ಬಿ. |
| **ಲಕ್ಷ್ಮಣ** | ಕೃಷ್ಣಪ್ಪ ತಿಂಗಳಾಯ |
| **ಸುದರ್ಶನ** | ಶ್ರೀ. ರಾ. ಚಂದ್ರಕಾವಿ |
| **ಸಿದ್ಧ** | ಶಂಕರನಾರಾಯಣ ಹೊಳ್ಳ |
| **ಮೆನೇಜರ ಮಹೇಂದ್ರ** | ನಾರಾಯಣ ರೈ |
| **ಲತೀಫ್ ಖಾನ್** | ಎಸ್. ಕೇಶವ ನಾಯಕ |
| **ಪರಮಾನಂದ ಶೇಟ್** | ನಾರಾಯಣ ಕರುಣಾಕರ |
| **ವಿಧ್ಯಾಧರ ಶೇಟ್** | ಕೊರಗ ಶೆಟ್ಟಿ |
| **ಹೆಡ್ ಕ್ಲಾರ್ಕ್** | ಕೊರಗ ಶೆಟ್ಟಿ |
| **ಮನೆಯ ಯಜಮಾನ** | ಉ. ಶಂಕರ ರಾವ್ |
| **ರಾಮು** | ಶಾಮು |
| **ವಿನಯ** | ಮಂಜುನಾಥ |
| **ಸೇಲ್ಸ್‌ಮೆನ್** | ವೇಣುಗೋಪಾಲ ರಾವ್ |
| **ಮುಕ್ತಾಬಾಯಿ** | **ಸ್ವ. ಮಾಧವ ತಿಂಗಳಾಯ** |
| **ಕಮಲಾ** | ನಾರಾಯಣ ಬಂಗೇರ |
| **ರಾಧಾ** | ಭೋಜರಾಜ ಮೆಂಡನ್ |
| **ಗೌರಿ** | ಹೊನ್ನಯ್ಯ ಪುತ್ರನ್ |
| **ಕೂಲಿಯವರು** | ಚೆನ್ನ, ಮುದ್ದ, ಬಸವ, ಕೇಚ, ಬೀರ, ನರಸ, ರಂಗ. |
| **ಹಾರ್ಮೋನಿಯಮ್ ವಾದನ** | ಮಾಸ್ಟರ್ ನಾರಾಯಣರಾಯರು |
| **ತಬಲಾ** | ಹುರುಳಿ ಭೀಮರಾಯರು |

# ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 19 | 1 | ಗೊಡು | ಗೊಡ್ಡು |
| 25 | 20 | ವಿನೋಧ | ವಿನೋದ |
| 28 | 1 | ಹುಜೂರು | ಹುಜೂರ್ |
| 28 | 5 | ಹುಜೂರು | ಹುಜೂರ್ |
| 33 | 15 | ವಿಷದ | ವಿಶದ |
| 40 | 20 | ಪರದೇಶಿ | ಪರದೇಶ |
| 50 | 3 | ರೂಪ್ಯಾ | ರೂಪಾಯಿ |
| 67 | 22 | ನಮು | ನಮ್ಮ |
| 82 | 11 | ಅದನ್ನೇ ವಿರೋಧಿಸುವಾಗ | ವಿರೋಧಿಸುವಾಗ ಅದನ್ನೇ |

# ಜಾಗ್ರತಿ.

## ಪ್ರಥಮಾಂಕ.

### ೧. ಲಕ್ಷ್ಮಣನ ಗುಡಿಸಲು.

(ಗುಡಿಸಲು. ಕತ್ತಲೆ ಕವಿದಿದೆ. ಬಲಭಾಗದಲ್ಲಿರುವ ಸಣ್ಣ ಕಿಟಿಕಿಯ ಮೂಲಕ ಆಕಾಶದಲ್ಲಿ ಮಿನುಗುತ್ತಿರುವ ನಕ್ಷತ್ರಗಳ ಒಂದಿಷ್ಟು ಬೆಳಕು ಕೋಣೆ ಯಲ್ಲಿ ಬಿದ್ದು ಅಲ್ಲಿರುವವರು ಅಸ್ಪಷ್ಟವಾಗಿ ಕಾಣುವರು! ಲಕ್ಷ್ಮಣನ ಹೆಂಡತಿ ಯಾದ ಕಮಲೆಯು ಮೂರು ನಾಲ್ಕು ದಿನಗಳಿಂದ ಚಳಿಜ್ವರದಿಂದ ಪೀಡಿತಳಾಗಿದ್ದು ಕೋಣೆಯ ಮೂಲೆಯಲ್ಲಿ ಹರಕು ಚಾಪೆಯ ಮೇಲೆ ಛಿದ್ರಕಂಬಳಿಯೊಂದನ್ನು ಹೊದ್ದುಕೊಂಡು ನರಳುತ್ತಿರುವಳು. ಕಿರಿಯ ಮಗು ಮುತ್ತುವು ತಾಯಿಯ ಬಳಿ ನಿದ್ರಿಸುತ್ತಿರುವನು. ಮನೆಯಲ್ಲಿ ಎರಡು ದಿನಗಳಿಂದ ಗಂಜಿ ಕೂಡಾ ಬೇಯಿ ಸದೆ ಇದ್ದುದರಿಂದ, ಕಮಲೆಯ ಹಿರಿಯ ಮಗು ವಿನಯನು ಹಸಿವೆಯನ್ನು ತಡೆಯ ಲಾರದೆ ಅಳುತ್ತಿರುವನು. ಒಂದೆರಡು ಮಣ್ಣಿನ ಪಾತ್ರೆ, ಒಂದು ಕಂಚಿನ ಚೆಂಬು, ಮೇಲೆ ಹಗ್ಗದಲ್ಲಿ ಛಿದ್ರಸೀರೆ, ಉಡುಪುಗಳು ಬಿದ್ದಿರುವುವು.)

**ವಿನಯ:**—(ಕೈಯಿಂದ ಹೊಟ್ಟೆಯನ್ನು ಹಿಸುಕಿಕೊಳ್ಳುತ್ತಾ) ಅಮ್ಮಾ, ಅಮ್ಮಾ, ಸಹಿಸಲಾರೆ; ಹಸಿವೆಯನ್ನು ಸಹಿಸಲಾರೆ. ಅಮ್ಮಾ, ನನಗೆ ಒಂದು ತುತ್ತು ಅನ್ನ ಆದರೂ ಕೊಡು. ಮತ್ತೆ ಎಂದೂ ನಾನು ಹಟ ಹಿಡಿಯುವುದಿಲ್ಲ.

**ಕಮಲ:**—(ಮಲಗಿದ್ದವಳು ಅತಿ ಕಷ್ಟದಿಂದ ಎದ್ದು ಕೂತು ವಿನಯ ನನ್ನು ತಬ್ಬಿ, ತಲೆ ನಿಧಾನವಾಗಿ ಸವರಿ, ದುಃಖದಿಂದ) ಹಾಯ್, ನನ್ನ ಮುದ್ದು ಕಂದನು ಹಸಿವೆಯಿಂದ ಸಾಯುವುದನ್ನು ನಾನು ಹೇಗೆ ನೋಡಲಿ. ಈ ಮುದ್ದು ಮಗುವಿನ ಹೊಟ್ಟೆಯನ್ನು ಹಸಿವೆಯಿಂದ ಉರಿಸುವಷ್ಟು ಬಡ ತನವು ನಮಗೆ ಬರಬೇಕೆ. ದೇವಾ, ನಮ್ಮಲ್ಲಿ ದಯೆದೋರು. ನಾವು ಯಾವ ಅಪರಾಧವನ್ನು ಮಾಡಿದುದಕ್ಕೆ ನಮ್ಮನ್ನು ಈ ರೀತಿ ಶಿಕ್ಷಿಸುವೆ. ಬಡತನವು ಸಾಲದುದಕ್ಕೆ ಈ ಜ್ವರಪೀಡೆಯನ್ನೂ ಕೊಟ್ಟಿರುವೆ. ದೇವಾ, ಬಡವರ ಮೊರೆಯನ್ನು ನೀನಲ್ಲದೆ ಬೇರೆ ಯಾರು ಕೇಳಬೇಕು.

**ವಿನಯ**:—(ತಾಯಿಯನ್ನು ಅಪ್ಪಿಕೊಳ್ಳುತ್ತಾ) ಅಮ್ಮಾ, ನನ್ನ ಹೊಟ್ಟೆ ಬಹಳ ನೋಯುತ್ತಿರುವುದು. ಹಸಿವೆಯಿಂದ ತಲೆತಿರುಗುತ್ತಿರುವುದು. ತಂದೆಯೆಲ್ಲಿರುವರು? ತಿಂಡಿ ತರುವೆನೆಂದು ಹೋದವರು, ಇನ್ನೂ ಕಾಣುವುದಿಲ್ಲವೇನು?

**ಕಮಲ**:—(ತನ್ನ ಮಗನ ಕೋಮಲವಾದ ಕೆನ್ನೆಯನ್ನು ಕೈಯಿಂದ ಸವರುತ್ತಾ) ಮಗೂ, ನಿನ್ನ ಅಪ್ಪ ಈಗಾಗಲೇ ಬರುತ್ತಾರೆ. ಹಟಮಾಡಬೇಡ. ವಿನಯಾ, ನಾವು ಬಡವರು; ನೀನು ಹೀಗೆ ಯಾವಾಗಲೂ ತಿಂಡಿಗಾಗಿ ಹಟಹಿಡಿದರೆ, ನಾವು ಎಲ್ಲಿಂದ ತಂದುಕೊಡಲಿ?

**ವಿನಯ**:—ಅಮ್ಮಾ, ನನಗೆ ತಿಂಡಿಯೇ ಬೇಡ. ನಾನು ಹಟಹಿಡಿಯುವುದಿಲ್ಲವಮ್ಮಾ. ನನಗೆ ಒಂದಿಷ್ಟು ಹಾಲನ್ನಾದರೂ ಕೊಡು, ನಾನು ಸುಮ್ಮನಿರುವೆನು.

**ಕಮಲ**:—(ಮಗುವಿನ ಆ ಮಾತನ್ನು ಕೇಳಿ ದುಃಖವು ಉಕ್ಕಿ ಕಂಠವು ಗದ್ಗದಿತವಾಗಿ) ಅಯ್ಯೋ ದೇವಾ, ನಮ್ಮ ಬಡತನದ ಬಾಳನ್ನು ಯಾರ ಮುಂದೆ ಹೇಳಲಿ. ಮಗುವಿಗೆ ಹಾಲು ಕೊಡಲು ಆರುಕಾಸಿನ ಗತಿಯಿಲ್ಲದ ಹಾಗಾಯಿತು. ದುಡಿದ ಹಣವೆಲ್ಲಾ ನನ್ನ ಔಷಧಿಗೇ ವ್ಯಾಯವಾಯಿತು. ಮನೆಯಲ್ಲಿ ಬೆಂಕಿ ಉರಿಸದೆ ಎರಡು ದಿನಗಳಾದುವು. (ಸ್ವಲ್ಪಹೊತ್ತು ಮೌನವಾಗಿದ್ದು) ಅವರು ಇನ್ನೂ ಕಾಣುವುದಿಲ್ಲ. ವೈದ್ಯರು, ಹಣವಿಲ್ಲದೆ ಔಷಧ ಕೊಡಲು ತಿರಸ್ಕರಿಸಿದರೋ ಏನೊ. (ವಿನಯನಿಗೆ) ವಿನಯ, ಸ್ವಲ್ಪ ವಿಶ್ರಮಿಸು, ತಂದೆಯವರು ಬರುವ ಸಮಯವಾಯಿತು. (ಇಬ್ಬರೂ ಮಲಗಿಕೊಳ್ಳುವರು. ಸ್ವಲ್ಪಹೊತ್ತಿನ ತರುವಾಯ ಲಕ್ಷ್ಮಣನು ಬರಿಯ ಮದ್ದಿನ ಬಾಟಲಿಗಳನ್ನು ಹಿಡಿದುಕೊಂಡು ಮೆಲ್ಲನೇ ಪ್ರವೇಶಿಸುವನು. ಮನೆಯಲ್ಲಿ ದೀಪವಿಲ್ಲದುದನ್ನು ಕಂಡು ಕಮಲೆಯೊಡನೆ)

**ಲಕ್ಷ್ಮಣ**:—ಕಮಲೆ, ದೀಪಹಚ್ಚಲು ಮರೆತುಹೋಯಿತೇ? ಎಲ್ಲಿ ಬೆಂಕಿಪೊಟ್ಣ? (ಅಲ್ಲಿ ಇಲ್ಲಿ ಹುಡುಕಿ ದೊರೆತ ಬೆಂಕಿಪೆಟ್ಟಿಗೆಯಲ್ಲಿ ಒಂದೇ ಒಂದು ಕಡ್ಡಿ ಉಳಿದಿರುವುದನ್ನು ಕಂಡು ನಿರಾಶೆಯ ನಿಟ್ಟುಸಿರನ್ನು ಬಿಟ್ಟು) ಲಾಂದ್ರವೆಲ್ಲಿದೆ? (ಮೂಲೆಯಲ್ಲಿದ್ದ ಸಂಪೂರ್ಣ ಮಣ್ಣುಹಿಡಿದ ಲಾಂದ್ರವನ್ನು ತೆಗೆದು ಕುಲುಕಿ ಅದರಲ್ಲಿ ಎಣ್ಣೆಯು ತೀರಾ ಬರಿದಾಗಿರುವುದನ್ನು ಕಂಡು ಲಾಂದ್ರ

ವನ್ನು ಕೆಳಗಿಟ್ಟು, ಉರಿಸಿದ ಆ ಒಂದು ಕಡ್ಡಿಯ ಬೆಳಕಿನಲ್ಲಿ ತನ್ನ ಸಂಸಾರ ವನ್ನೊಮ್ಮೆ, ಆ ಮುರುಕು ಕೊಠಡಿಯನ್ನೊಮ್ಮೆ ನೋಡಿ ಕಡ್ಡಿಯನ್ನು ಬಿಸಾಡಿ ಅದನ್ನು ಪಾದದಿಂದ ತುಳಿದು ನಂದಿಸುತ್ತಾ) ಹಾಯ್, ವಿಶ್ವವಿದ್ಯಾಲಯದ ಬಿ. ಎ. ಸನ್ನದನ್ನು ಸಂಪಾದಿಸಿದ ಈ ನಿರ್ಭಾಗ್ಯನಿಗೆ, ಕಡೆಗೆ ಒಂದು ದೀಪ ಉರಿಸಲು ಕೂಡಾ ಗತಿಯಿಲ್ಲದಾಯಿತೇ? (ಹಣೆಬಡಕೊಳ್ಳುವನು. ಅಷ್ಟರಲ್ಲಿ ತಂದೆ ಬಂದಿರುವುದನ್ನರಿತ ವಿನಯನು ಓಡಿಬಂದು ಲಕ್ಷ್ಮಣನನ್ನು ಅಪ್ಪಿಕೊಂಡು)

**ವಿನಯ:**—ಅಪ್ಪಾ, ಅಪ್ಪಾ, ಎಲ್ಲಿ ತಿಂಡಿ? ನನಗೆ ಹಸಿವೆಯಾಗು ತ್ತದೆ. (ಅಳುತ್ತಾ) ಅಪ್ಪಾ, ನನಗೆ ತಿಂಡಿ ಕೊಡಪ್ಪಾ.

**ಲಕ್ಷ್ಮಣ:**—(ಆತನ ಬೆನ್ನು ಚಪ್ಪರಿಸುತ್ತಾ ಗದ್ಗದ ಕಂಠದಿಂದ) ವಿನಯಾ, ಹೀಗೆಲ್ಲಾ ಹಟಹಿಡಿಯಕೂಡದು. ಯಾವಾಗಲೂ ತಿಂಡಿ ತಿಂದರೆ, ಹೊಟ್ಟೆಯಲ್ಲಿ ಹುಳಗಳು ಹುಟ್ಟುತ್ತವೆ. ಹೋಗು, ಅಮ್ಮನೊಂದಿಗೆ ಮಲಗಿಕೊಳ್ಳು.

(ವಿನಯನು ಅಳುತ್ತಾ ತಾಯಿಯ ಬಳಿಗೆ ಹೋಗುವನು)

**ಲಕ್ಷ್ಮಣ:**—(ಕಣ್ಣೀರು ತುಂಬಿದವನಾಗಿ) ಅಯ್ಯೋ ದೇವಾ, ಈ ದುಃಖವನ್ನು ಸಹಿಸಲಾರೆ. ನನ್ನ ಕರುಳು-ನನ್ನ ಮಗು, ಹಸಿವೆಯಿಂದ ತಳಮಳಿಸುವುದನ್ನು ಕಂಡೂ, ಪಾಪಿಯಾದ ನಾನು ಬಾಲಕನನ್ನು ಗದರಿ ಸುವಷ್ಟು ಕಠಿಣ ಹೃದಯನಾದೆ. ಬಿ. ಎ. ಕಲಿತರೂ, ಈ ಬಡತನವು ನನ್ನನ್ನು ಬಿಡಲಿಲ್ಲ. ವಿದ್ಯಾವಂತನಾದ ನನಗೆ, ನನ್ನ ಸಂಸಾರವನ್ನು ಸಾಕು ವುದು ಅಸಾಧ್ಯವಾಯಿತೇ? ನಾನು ದುಡಿಯುವ ಹಣ, ನನ್ನ ಮಡದಿ ಮಕ್ಕಳಿಗೆ ದಿನಕ್ಕೆ ಒಂದು ತುತ್ತು ಅನ್ನ ಹಾಕಲು ಸಾಲದಾಯಿತೇ? ನಾನಿಷ್ಟು ಕಲಿತು ಪ್ರಯೋಜನವೇನು? ನನ್ನ ಸಂಸಾರವನ್ನು ಸುಖವಾಗಿ ಪೋಷಿಸಲು ಸಹಾಯಮಾಡದ ಸನ್ನದು, ನನಗೆ ಏನು ಉಪಕಾರವನ್ನು ಮಾಡಬಲ್ಲದು? ಅಯ್ಯೋ, ಒಂದು ಹೊತ್ತು ಉಂಡರೆ ಮತ್ತೊಂದು ಹೊತ್ತು ಉಪವಾಸ. (ತನ್ನ ತಲೆಕೂದಲನ್ನು ಕೆದರಿಕೊಳ್ಳುತ್ತಾ) ಇದೂ ಅಲ್ಲದೆ ನಮ್ಮ ದುಃಖವನ್ನು ಇನ್ನೂ ಹೆಚ್ಚಿಸುವ ಈ ರೋಗಾದಿಗಳು. ಹಣವಿಲ್ಲದೆ ವೈದ್ಯನು ಔಷಧಿ ಕೊಡಲೊಪ್ಪನು. ಜ್ವರಪೀಡಿತಳಾದ

ಕಮಲೆಗೆ ಔಷಧಿ ತರಲು ಎಲ್ಲರಲ್ಲೂ ಸ್ವಲ್ಪ ಹಣ ಬೇಡಿದೆ. ಯಾರೂ ಬಡವರನ್ನು ನಂಬುವಹಾಗಿಲ್ಲ. ದೇವಾ, ನೀನೇ ನಮಗೆ ಗತಿ. **(ಕಮಲೆಯ ಕಡೆಗೆ ತಿರುಗಿ, ಮೆಲ್ಲನೆ ಆಕೆಯ ಬಳಿಗೆ ಹೋಗಿ, ಪಕ್ಕದಲ್ಲಿ ಕೂತು)** ಕಮಲಾ, ಜ್ವರವು ಈಗ ಹೇಗಿದೆ? ಗಂಜಿ ಬೇಯಿಸುವಷ್ಟು ತ್ರಾಣ ವಿದೆಯೆ? ಪಕ್ಕದ ಮನೆಯಿಂದ, ಒಂದು ಪಾವು ಅಕ್ಕಿಯನ್ನಾದರೂ ಬೇಡಿ ತರುತ್ತೇನೆ.

**ಕಮಲ:**—(ಮಲಗಿದ್ದಲ್ಲಿಂದಲೇ) ನನಗೆ ಏಳಲು ತ್ರಾಣವಿಲ್ಲ. ಜ್ವರವು ಏರುತ್ತಲಿದೆ.

**ಲಕ್ಷ್ಮಣ:**—(ಸ್ವಲ್ಪಹೊತ್ತು ಹಣೆಯನ್ನು ಬೆರಳಿನಿಂದ ತಿಕ್ಕುತ್ತಾ ಚಿಂತಿಸುತ್ತಿದ್ದು) ಹಾ! ಇವಳ ಜ್ವರನಿವಾರಣೆ ಮಾಡದ ಹೊರತು ಗತ್ಯಂತರ ವಿಲ್ಲ. ನಾನು ಇತ್ತ ಗಿರಣೀ ಕೆಲಸಕ್ಕೆ ಹೋದರೆ, ಇವಳು ಈ ರೀತಿ ಜ್ವರದಲ್ಲಿ ನರಳಿದರೆ, ಮಕ್ಕಳ ಹಾಗೂ ಅಡುಗೆಯ ವಿಚಾರವನ್ನು ಯಾರು ತೆಗೆದುಕೊಳ್ಳಬೇಕು? (ಕೊಂಚ ಹೊತ್ತು ಮೌನವಾಗಿ ಚಿಂತಿಸಿ) ಆಗಲಿ, ತಿಂಗಳ ಸಂಬಳ ದೊರೆಯಲು ಇನ್ನು ಒಂದು ವಾರ ಮಾತ್ರವಿದೆ. ಮೆನೆಜರನ ಕೂಡೆ, ನನ್ನ ಸಂಬಳದಿಂದ ಐದು ರೂಪಾಯಿಗಳನ್ನಾದರೂ ಕೊಡುವಂತೆ ಬೇಡಿಕೊಳ್ಳುವೆನು. (ಕಮಲೆಯನ್ನುದ್ದೇಶಿಸಿ) ಕಮಲೆ, ಮಕ್ಕಳು ಹಸಿವೆಯಿಂದ ಅತ್ತರೆ, ಕಷ್ಟಸಹಿಸಿ, ಸ್ವಲ್ಪ ನೀರನ್ನಾದರೂ ಬಿಸಿ ಮಾಡಿ ಕುಡಿಸು. ನಾನೀಗಲೇ ಮೆನೆಜರನ ಬಳಿಗೆ ಹೋಗಿ ಕೆಲವು ರೂಪಾಯಿಗಳನ್ನು ಈಸಿಕೊಂಡು ಬರುವೆನು.

**ಕಮಲ:**—ಆದರೆ . . . . ಆದರೆ, ನೀರನ್ನು ಯಾವುದರಿಂದ ಬಿಸಿ ಮಾಡಲಿ? ಕಟ್ಟಿಗೆಯೂ ಇಲ್ಲ. ಬೆಂಕಿಯಂತೂ ಎರಡು ಮೂರು ದಿನ ಗಳಿಂದ ಒಲೆಯನ್ನು ನೋಡಲಿಲ್ಲ.

**ಲಕ್ಷ್ಮಣ:**—(ಹೊರಸೂಸುತ್ತಿರುವ ದುಃಖವನ್ನು ತಡೆಯಲು ಔಡುಗಚ್ಚಿ) ಹುಂ, ಮರೆತಿದ್ದೆನು. ಕಮಲಾ, ಮಕ್ಕಳು ಅನ್ನಕ್ಕಾಗಿ ಅತ್ತರೆ, ಹಸಿವಿನಿಂದ ಬಳಲುತ್ತಿರುವ ಆ ಪುಟ್ಟ ಉದರವನ್ನು ಕೈಯಿಂದ ಒತ್ತಿಹಿಡಿದು ಮಲಗಿಸು. **(ಎಂದು ಹೇಳಿ ಭಾರವಾದ ಹೆಜ್ಜೆಯಿಡುತ್ತಾ ಕೆಳಬಗ್ಗಿದ ಮೋರೆಯಿಂದ ಹೋಗುವನು. ಕಮಲೆಯೂ ವಿನಯನೂ ಆತನನ್ನೇ ನೋಡುವರು.)**

---

## ೨. ಮಾರ್ಗ.

(ಲಕ್ಷ್ಮಣನು ಪ್ರವೇಶಿಸುವನು.)

ಸುರುಟಿ. — ಅಷ್ಟ ತಾಳ.

**ಲಕ್ಷ್ಮಣ:**— ಹಣವೇ ನಿನ್ನಯ ಗುಣವೆಷ್ಟು ಬಣ್ಣಿಸಲೀ ।
ಹಣವಿಲ್ಲದವನೊಬ್ಬ ಹೆಣವೇ ಸರಿಯೆ ಕಂಡ್ಯಾ ॥ ಪಲ್ಲ ॥

ಬೆಲೆಯಿಲ್ಲದವನಿಗೆ । ಬೆಲೆಯ ಮಾಡಿಸುವೇ ।
ಎಲ್ಲಾ ವಸ್ತುಗಳನ್ನೂ । ಇದ್ದಲ್ಲೆ ತರಿಸುವೇ ॥
ಕುಲಗೆಟ್ಟವನ ತಾ ಕುಲಕೆ ಸೇರಿಸುವೇ ।
ಹೊಲೆಯನಾದರು । ಅವನಾ । ಮನೆಯೊಳಗಿರಿಸುವೆ ॥ ೧ ॥

ಅಂಗನೆಯರ ಸಂಗ ಪೂರ್ಣ ಮಾಡಿಸುವೇ ।
ಶೃಂಗಾರದಾಭರಣ ಇದ್ದಲ್ಲೆ ತರಿಸುವೆ ॥
ಮಂಗನಾದರು ಅವನಾ । ಮನುಮಥನೆನಿಸುವೆ ।
ಕಣ್ಣಿಲ್ಲದವಗೆ । ಮಗಳನ್ನೆ ಕೊಡಿಸುವೆ ॥ ೨ ॥

(ದಾಸರಪದ.)

---

## ೩. ರಾವ್‌ಬಹದ್ದೂರ ಜಗಜೀವನರಾಯರ ಭವನ.

(ಆತನ ತರುಣ ಪತ್ನಿಯಾದ ಮುಕ್ತಾ ಬಾಯಿಯ ಕೊಠಡಿ:—ನಾಲ್ಕು ಮೂಲೆಗಳಲ್ಲಿ ಪುಷ್ಪವಾಟಿಕೆಗಳು. ಈ ಮಧ್ಯದಲ್ಲಿ ದೊಡ್ಡದೊಂದು ನಿಲುವುಗನ್ನಡಿ. ಇದಿರಿನ ಸಣ್ಣದೊಂದು ಮೇಜಿನಲ್ಲಿ ಬಾಚಣಿಗೆ, ಸ್ನೋ, ಕೇಶರಂಜನಿ ತೈಲ, ಪೌಡರು ಡಬ್ಬಿ ಇವೆಲ್ಲಾ ಓರಣದಿಂದ ಇಡಲ್ಪಟ್ಟಿರುವವು. ಕನ್ನಡಿಯ ಇಕ್ಕಡೆಯಲ್ಲಿಯೂ ಎರಡು ಸೋಫಗಳು. ಬಲಭಾಗದ ಗೋಡೆಯಲ್ಲಿ, ಒಂದೆರಡು "ಟೆನ್ನಿಸ್ ರೇಕೇಟು"ಗಳು ತೂಗಹಾಕಲ್ಪಟ್ಟಿರುವುವು. ಮುಕ್ತೆಯು ಒಂದು ಇಂಗ್ಲಿಷ್ ಕಾದಂಬರಿಯನ್ನೂ ಹಿಡಕೊಂಡು ಪ್ರವೇಶಿಸಿ ಸೋಫದ ಮೇಲೆ ಕೂತು, ಕೆಲ ಹೊತ್ತು ಪುಸ್ತಕದ ಹಾಳೆಗಳನ್ನು ಸರಸರನೆ ಮಗುಚಿ, ಅತ್ತ ಇತ್ತ ನೋಡಿ, ಕಡೆಗೆ ನಿರಾಶೆಯ ಕೋಪದಿಂದ ಪುಸ್ತಕವನ್ನು ಬಿಸುಟು)

ಕಾಫಿ ಗಝಲ್

**ಮುಕ್ತಾ:**— ಮನ ಮೋಹನನಾಗಮನಾ ।
ಹಾ ಭಾವೀಸುವೆನಾಹಾ ॥
ಮನಮೋಹನನಾಗಮನಾ ।
ಭಾವೀಸುವೆನಾಹಾ ॥
ಧಾವೀಸುತಿಹುದು ಮನವೂ ।
ಮನ ಮೋಹನನಾಗಮನಾ ॥

ಹೃದಯ ಚಕೋರನ ವಿರಹಾ ।
ಸಹಿಸುವೇನೆಂತು— ಅನುತಾಪಾ ॥
ಸಹಿಸುವೇ— ನೆಂತು— ಅನುತಾಪಾ ।
ಸಹಿಸಲಾರೆನೇ— ಸುಮಚಾಪಾ ॥

ಅವರು ಇನ್ನೂ ಕಾಣುವುದಿಲ್ಲ. ನನಗೆ ಹೊತ್ತೇ ಹೋಗಲೊಲ್ಲದು. ಮನಸ್ಸನ್ನು ಸಂತೋಷಗೊಳಿಸಬೇಕೆಂದು ಎಷ್ಟು ಪ್ರಯತ್ನಿಸಿದರೂ ನಿಷ್ಫಲ. ಹಾರ್ಮೋನಿಯಂ, ಸಿನಿಮಾ, ನಾಟಕ, ಟೆನ್ನಿಸ್, ಕಾದಂಬರಿ, ಇವೆಲ್ಲಾ ಒಂದೆರಡು ದಿನ; ಕೊನೆಗೆ ಬೇಸರ ಹತ್ತುವುದು. ಅವರೇಕೆ ಇನ್ನೂ ಬಂದಿಲ್ಲ? (ಸ್ವಲ್ಪ ಹೊತ್ತು ಬಾಗಿಲ ಕಡೆಗೆ ನೋಡುತ್ತಿದ್ದು) ಮುತ್ತಿನ ಹಾರವನ್ನು ತಂದುಕೊಡಲು ಹಟಹಿಡಿದು, ಅವರೊಡನೆ ಕೋಪ ಮಾಡಿದೆನು. ಮಾತು ಬಿಟ್ಟೆ. ಆದರೆ ನಿಷ್ಪ್ರಯೋಜನ, ಬರೇ ಒಣಸಿಟ್ಟು. ಗಿರಣಿಗಳ ಹೊಸ ಯೋಜನೆಯಲ್ಲಿ ಮುಳುಗಿದ್ದ ಅವರಿಗೆ ನನ್ನ ನೆನಪೇ ಆಗುವಂತಿಲ್ಲ. (ಏನೋ ನೆನಪಿಗೆ ಬಂದವಳಂತೆ ನಟಿಸಿ) ಅವರು, ನನ್ನ ಜನ್ಮ ದಿನೋತ್ಸವವನ್ನು ಆಚರಿಸಬೇಕೆಂದು ಹೇಳುತ್ತಿದ್ದರು. ಅದನ್ನು ಅವರ ನೆನಪಿಗೆ ತರಲೆ? ನಾನಾಗಿ ಸಿಟ್ಟುಮಾಡಿಕೊಂಡು ಹೇಗೆ ಮಾತಾಡಲಿ? (ಸ್ವಲ್ಪ ವಿಚಾರ ಮಾಡಿ) ಈ ಹಾಳು ಅಭಿಮಾನವು ಬಿಡಲಾರದಲ್ಲಾ. ಇರಲಿ, ನಾನಾಗಿ ಯಾಕೆ ಮೌನವ್ರತ ಮುರಿಯಲಿ. ನೋಡುವೆನು, ಎಷ್ಟರ ತನಕ ಅವರ ಸಿಟ್ಟು ನಿಲ್ಲುವುದೋ ಎಂದು. ಅವರು ಶರಣು ಬಂದೇ ಬರುವರು. (ಹೀಗೆಂದು ಮುಂಚೆ ಬಿಸಾಡಿದ ಪುಸ್ತಕವನ್ನು ಹೆಕ್ಕಿ ಪುನಃ ಓದಲು ಪ್ರಾರಂಭಿಸುವಳು. ಅಷ್ಟರಲ್ಲಿ ಜಗಜೀವನರಾಯನು ಕೋಣೆಯನ್ನು ಪ್ರವೇಶಿಸಿ ಕಳ್ಳ ಹೆಜ್ಜೆಯಿಂದ ಮುಕ್ತೆಯ ಬಳಿಗೆ ಬಂದು ಮುಕ್ತೆಯ ಕಣ್ಣಿಗೆ ಕೈ ಹಿಡಿಯುವನು.)

**ಮುಕ್ತಾ**:—(ತನ್ನ ಸಖಿ ಸುನಂದೆಯೊಂದು ಸಿಟ್ಟಿನಿಂದ) ಸುನಂದಾ ಬಿಡು; ಬಿಡು; ಕಣ್ಣು ನೋಯುತ್ತಿರುವುದು. ನಿನ್ನ ಆಟ ಸಾಕುಮಾಡು; ನನಗೆ ತೊಂದರೆ ಕೊಡಬೇಡ.

**ಜಗಜೀವನ**:—(ಕಿರುನಕ್ಕು) ಊ ಹುಂ.

**ಮುಕ್ತಾ**:—ಬಿಡುವುದಿಲ್ಲವೆ? ಸುನಂದಾ, ನೀನಿಂದಿನಿಂದ ನನ್ನ ಸಖಿಯಾಗಿರುವುದು ಬೇಡ. ಅವರು ಬಂದರೆಂದರೆ, ನಿನ್ನ ಈ ವರ್ತನೆ ಯನ್ನು ಅವರೊಡನೆ ಹೇಳಿ ನಿನ್ನನ್ನು ಹೊರ ಹೊರಡಿಸುತ್ತೇನೆ.

**ಜಗಜೀವನ**:—ಹ್ಹ—ಹ್ಹ—ಹ್ಹಾ, ಹೊರಡಿಸುವೆಯಾ!

**ಮುಕ್ತಾ**:—ಹೂಂ! ಯಾರು ನಗುವರು!! ಎಷ್ಟು ಧೈರ್ಯ ನನ್ನೆದು ರಿಗೆ ಈ ರೀತಿ ವರ್ತಿಸಲು? (ಜಗಜೀವನನ ಕೈ ಬೆರಳನ್ನು ಚಿವುಟುವಳು. ರಾಯನು ನೋವಿನಿಂದ "ಹಾಯ್ ಹಾಯ್" ಎಂದು ಕೈ ತೆಗೆಯುವನು. ಮುಕ್ತೆಯು ಅವನನ್ನೊಮ್ಮೆ ದಿಟ್ಟಿಸಿ ನೋಡಿ ಮೋರೆ ತಿರುಗಿಸಿ ಮುಗುಳು ನಗುವಳು.)

**ಜಗಜೀವನ**:—(ತನ್ನ ಕೈ ಸವರುತ್ತಾ) ಹೆಂಗಸರು ಕೋಪಿಸಿದರೆಂದರೆ ಗಂಡಸರು ಸೋಲಲೇ ಬೇಕಾಗುವುದು.

**ಮುಕ್ತಾ**:—(ಸಿಡುಕಿನಿಂದ) ಹೋಗಿರಿ, ನಾಚಿಕೆಯಾಗುವುದಿಲ್ಲವೆ?

**ಜಗಜೀವನ**:—ಯಾರಿಗೆ? ನನಗೋ? ನಿನಗೋ?

**ಮುಕ್ತಾ**:—ಬೇಡ, ನನ್ನೊಡನೆ ಮಾತನಾಡಬೇಡಿರಿ. ನಾನೊ ಬ್ಬಳೇ ಕುಳಿತಿರುವೆನು.

**ಜಗಜೀವನ**:—(ಸ್ವಲ್ಪ ಹೊತ್ತು ಆಕೆಯನ್ನೇ ನೋಡುತ್ತಾ ಕಡೆಗೆ) ಆಗಲಿ ಹೋಗುವೆನು, ಯಾವಾಗ ನೀನು ನನಗಾಗಿ ಹಂಬಲಿಸುವಿಯೋ ನೋಡುವೆನು. (ಹೋಗುವನು. ಮುಕ್ತೆಯು ತಿರುಗಿ ನೋಡಿ ದುಃಖದಿಂದ ಮೋರೆ ತಿರುಗಿಸುವಳು. ಜಗಜೀವನನು ಪುನಃ ಪ್ರವೇಶಿಸಿ)

**ಜಗಜೀವನ**:—ಪ್ರಿಯೇ, ಸಾಕು ಈ ಸೋಗು. ನಿನ್ನ ಮನ ನೋಯಿಸುವುದು ನನ್ನಿಂದಾಗದ ಕಾರ್ಯ. ನೀನು ಸಂತೋಷದಲ್ಲಿರ ಬೇಕೆಂಬುದೇ ನನ್ನ ಪ್ರಯತ್ನ. ಮುಕ್ತಾ ಮಾತಾಡು.

**ಮುಕ್ತಾ:**—(ಮುಗುಳುನಗುತ್ತಾ ಪತಿಯನ್ನು ಮೃದುವಾಗಿ ಆಲಂಗಿಸಿ) ಕ್ಷಮಿಸಿರಿ ನಾಥಾ. ನಿಮ್ಮನ್ನು ಅರೆಗಳಿಗೆ ನೋಡದೆಯಿದ್ದರೆ, ನನ್ನ ಮನವು ಕಳವಳ ಗೊಳ್ಳುತ್ತಿರುವುದು. ನಿಮ್ಮಲ್ಲಿ ಕೋಪಗೊಂಡು ನಾನು ಎಷ್ಟು ದಿನಗಳೆಯಲು ಸಾಧ್ಯವಿದೆ? ಹೆಂಗುಸರ ಕೋಪದಲ್ಲಿ ಪ್ರೇಮವೂ ಅಡಗಿ ಕೊಂಡಿದ್ದು, ಕೋಪವೂ ಬಲವಾದಷ್ಟು ಪ್ರೇಮವೂ ಬೆಳೆಯುವುದಲ್ಲವೇ?

**ಜಗಜೀವನ:**— ನನ್ನ ಮೇಲಿನ ನಿನ್ನ ಪ್ರೇಮವು ನಿಷ್ಕಳಂಕವಾಗಿರ ಬೇಕೆಂದೇ ನಾನು ಆಶಿಸುವೆನು. ಅದಿರಲಿ; ಮುಕ್ತಾ, ಬರುವ ಭಾನುವಾರ ನಿನ್ನ ಜನ್ಮದಿನೋತ್ಸವವನ್ನು ಆಚರಿಸಬೇಕೆಂದಿರುವೆನು. ಇದರಲ್ಲಿ ನಿನ್ನ ಅಭಿಪ್ರಾಯವೇನು?

**ಮುಕ್ತಾ:**— ನನ್ನದೇನು? ನಿಮ್ಮ ಇಚ್ಛೆಗೆ ವಿರೋಧವಾಗಿ ವರ್ತಿ ಸುವ ಅಧಿಕಾರವಾದರೂ ನನಗಿರುವುದೇ? ನಿಮ್ಮ ಇಚ್ಛೆಯೇ ನನ್ನಿಚ್ಛೆ.

**ಜಗಜೀವನ:**— ಓಹೋ, ಎಷ್ಟು ವಿಧೇಯತೆ ತನ್ನ ಕೆಲಸವಾಗ ಬೇಕಾದಾಗ. ನಡೆ, ಇಂದು ನಮ್ಮ ರಮಾನಂದರಾಯರು ನಮ್ಮನ್ನು ಒಂದು ಉಪಹಾರ ಕೂಟಕ್ಕೆ ಕರೆದಿರುವರು. ಕಾರಣ, ಬೇಗನೇ ಸಿದ್ಧಳಾಗು.

**ಮುಕ್ತಾ:**—(ಜಗಜೀವನನು ಹಿಡಕೊಂಡ ತನ್ನ ಕೈಯನ್ನು ಬಿಡಿಸಿ ಕೊಂಡು) ಓಹೋ ಅಗತ್ಯವಾಗಿಯೂ. (ಕನ್ನಡಿ ನೋಡಿ ಮುಖಕ್ಕೆ ಪೌಡರು ಹಚ್ಚಲು ಪ್ರಾರಂಭಿಸುವಳು.)

**ಜಗಜೀವನ:**— ತಡವಾಯಿತು. ಬೇಗನೇ ಹೊರಡು, ಪೌಡರ್ ಗಿವ್ವರ್ ಬೇಡ. ಅಲ್ಲಿ ಏನು 'ಸ್ಟೇಜಿ'ನ ಮೇಲೆ ಹೋಗಬೇಕಾದುದಿಲ್ಲ.

**ಮುಕ್ತಾ:**— ನೀವೇ ಹೇಳುತ್ತೀರಲ್ಲವೇ, ಎಲ್ಲಾದರೂ ಹೋದರೆ, ಜನರು ನನ್ನನ್ನೇ ನೋಡುತ್ತಿರುವರೆಂದು.

**ಜಗಜೀವನ:**— ಪೌಡರು ಹಚ್ಚದಿದ್ದರೂ ನಿನ್ನನ್ನೇ ನೋಡುತ್ತಾರೆ. ನಿನ್ನಷ್ಟು ರೂಪವತಿಯರು ಬೇರೆ ಯಾರೂ ಇಲ್ಲ ಅಲ್ಲಿ.

**ಮುಕ್ತಾ:**—(ಹೊರಡಲು ಮುಂದೆ ಬಂದು ಪುನಃ ನಿಂತು) ಸೀರೆ ಬೇರೆ ಉಡುವುದು ಬೇಡವೇ?



ಮುಕ್ತಾ:—ಯಾರು? ಎಷ್ಟು ಧೈರ್ಯ!

**ಜಗಜೀವನ:**—ಗವರ್ನರರ ಪಾರ್ಟಿಗೆ ಸಾಕು ಈ ಸೀರೆ. ಬಾ, ಇನ್ನು ತಡಮಾಡಬೇಡ.

**ಮುಕ್ತಾ:**—(ಹೊರಡಲು ಹೊರಟು ಪುನಃ ಹಿಂದೆ ಬಂದು ಮೇಜಿನ ಕದವನ್ನು ಎಳೆದು ಹಣದ ಚೀಲವನ್ನು ತಗೊಂಡು) ಹಾ! ನನ್ನ 'ಮನಿಪರ್ಸ್' ಮರತೇ ಬಿಟ್ಟಿದ್ದೆ. ನಡೆಯಿರಿ ಹೋಗೋಣ. (ಇಬ್ಬರೂ ಕೈ ಕೈ ಹಿಡಿದು ಕೊಂಡು ಹೋಗುವರು.)

---

## ೪. ಗಿರಣೀ ಕೂಲಿಗಾರರ ಗಲ್ಲಿಯಲ್ಲಿಯ ಒಂದು ದಾರಿ.

(ಕೂಲಿಯಾಳುಗಳು ಅಮಲೇರಿದವರಾಗಿ ಪ್ರವೇಶಿಸುವರು. ಕೆಲವರ ಕೈಯಲ್ಲಿ ಮದ್ಯದ ಗಡಿಗೆಗಳಿರುವವು.)

**ರಂಗ:**—ಎಲೋ ನೋಡಿದೆಯೇನೊ. ಈ ಕಳ್ಳು, ಮನಸ್ಸನ್ನು ಎಷ್ಟು ಖುಶಿ ಮಾಡುವುದು. ಮುಂಜಾನೆಯಿಂದ ಸಂಜೆಯ ವರೆಗೆ, ಕಷ್ಟ ಪಟ್ಟು ಮೈನುರ್ಸಿಕೊಂಡ ನಮ್ಗೆ, ಇದನ್ನು ಕುಡ್ಕೊಡನೆ, ದೇಹದಲ್ಲಿ ಹೊಸ್ತೊಂದು ಬಲ ಬಂದು, ನಾವು ಮಾಡಿದ ಕಷ್ಟದ ಆಯಾಸವೆಲ್ಲಾ ಮಾಯವಾಗವುದು.

**ಚೆನ್ನ:**—ಹೌದ್ನೋಡೊ, ಇದು ನಮ್ದೇವ್ರು. ಇದೊಂದು ಅಲ್ಲ ದಿದ್ರೆ, ನಮ್ಗತಿ ಕೇಳ್ವವರಾರು? ಈ ಹೆಂಡವನ್ನು ಕುಡಿದರೆ ನಮ್ಗೆಷ್ಟು ಬಲಾ ಬರ್ತೈತೆ. ಅದು ಕುಡ್ವ ತಾಯಿ ಮಕ್ಕಳಿಗೆ ಗೊತ್ತಲ್ಲದೆ ಕುಡಿಯದ ಬಡ್ಡೀ ಮಕ್ಕಳಿಗೆ ಗೊತ್ತುಂಟೇ?

**ನರ್ಸ:**—ಎಲೊ, ನಮ್ಗೀಗ ಕೊಡುವ ಕೂಲಿಯಿಂದ ಬೇಕಾದಷ್ಟು ಕುಡಿಯಲಿಕ್ಕೆ ಆಗೋದಿಲ್ಲ. ಆದ್ದರಿಂದ, ಇನ್ಮುಂದೆ ಕೂಲಿ ಹೆಚ್ಚಾಗ ಬೇಕೆಂದು, ಯಜಮಾನರ ಕೂಡೆ ಕೇಳಬೇಕು. ಅಲ್ಲ ಕಾಣೋ, ಈ ಕಳ್ಳನ್ನು, ಉಪಯೋಗ್ಸಿದವರಿಗೆ ಮದ್ದಿನ ಅಗತ್ಯವುಂಟೇ? ಆಸ್ಪತ್ರಿ ಬೇಕೆ?

**ಸಿದ್ದ:**—ಕೂಲಿ ಹೆಚ್ಚಾಗಲೇ ಬೇಕು. ನನ್ನ ಹೆಂಡ್ತಿಯೂ ಹಾಗೆ ಹೇಳ್ತಾಳೆ. (ಎಲ್ಲರೂ ನಗುವರು) ಇದರ ಕುರಿತು ಲಕ್ಷ್ಮಣನ ಕೂಡೆ ವಿಚಾರ್ಸಬೇಕು. ಆದರೆ, (ತಲೆ ತುರಿಸಿಕೊಂಡು) ಅವನ ಕೂಡೆ ಈ ಪ್ರಸ್ತಾಪ

ವೆತ್ತಿದರೆ, ಕಳ್ಳು ಕುಡಿಯಬಾರದೆಂದು ಉಪ್ದೇಸ ಮಾಡ್ತಾನಲ್ಲವೇ? ಮಿತ್ರರೇ, ನಾವಾದರೂ ಕಳ್ಳು ಕುಡಿಯುವವರೆಂದಾಯ್ತು. ಆದರೆ, ಕಳ್ಳು ಕುಡಿಯದ ಲಕ್ಷ್ಮಣನಿಗೆ, ನಮಗೆ ಸಿಗುವಷ್ಟು ಕೂಲಿ ಸಿಕ್ಕರೂ, ಅದು ಅವನಿಗೆ ಸಾಲದೆ, ಇತರರ ಕೂಡೆ ಸಾಲ ಬೇಡುತ್ತಾನಲ್ಲವೇ? ಹೀಗಾದ ಮೇಲೆ, ಕಳ್ಳು ಕುಡಿಯುವ ನಮಗೂ, ಕಳ್ಳು ಕುಡಿಯದ ಆತನಿಗೂ, ಏನು ಭೇದ?

**ರಂಗ:**—(ತೆರೆಗೆ ನೋಡಿ ಲಕ್ಷ್ಮಣನ ಆಪ್ತಮಿತ್ರನೂ ವಿದ್ಯಾವಂತ ಗಿರಣೀ ಕೂಲಿಯಾಳುವೂ ಆದ ಸುದರ್ಶನನು ಬರುತ್ತಿರುವುದನ್ನು ಕಂಡು) ನೋಡಿರೊ, ಲಕ್ಷ್ಮಣನ ಬಲಗೈಯಂತಿರುವ, ಆ ಸುದರ್ಶನನು ಇತ್ತ ಕಡೆ ಬರ್ತಾನೆ. ಇವರೆಲ್ಲರೂ, ನಮ್ಮ ಹಾಗೆ ಬರಿಯ ಕೂಲೀಕಾರರಾದರೂ, ನಮಗೇ ಬುದ್ಧಿ ಹೇಳ್ತಾರಲ್ಲಾ. ಹೆಂಡ ಕುಡಿಯಬಾರದಂತೆ; ಯಾವ ನ್ಯಾಯ ಇವರದು? ಕಾಪಿ ಕುಡಿಯಬಹುದು; ಹೆಂಡ ಕುಡಿಯಬಾರದೆ? ಇವರು, ವಿದ್ಯೆ ಕಲಿತವರೆಂದು ಹೀಗೆ ಮಾತಾಡೋದು ಸರಿಯಲ್ಲ. ಆ ಲಕ್ಷ್ಮಣ, ಬಿ. ಎ. ಪಾಸು ಮಾಡಿದರೂ, ಒಂದು ಒಳ್ಳೆ ಕೆಲ್ಸ ಸಿಕ್ಕಲಿಲ್ಲ. ಯಾಕೆ ಬಲ್ಲಿರೊ; ಈ ಅಲ್ಲದ ಸಲ್ಲದ ಉಪ್ದೇಸ ಮಾಡುವ ಒಂದು ದುಶ್ಚಾಳಿಯಿಂದ. ನಡೆಯಿರಿ ಹೋಗೋಣ. ಇನ್ನು, ಇಲ್ಲಿ ನಿಂತರೆ, ಈ ಮಹಾರಾಯ 'ಲೆಕ್ಚರಿ'ಗೆ ಸುರುಮಾಡುವನು.

(ಅಷ್ಟರಲ್ಲಿ ಸುದರ್ಶನನು ಪ್ರವೇಶಿಸಿ, ಕೆಲವು ಕೂಲಿಕಾರರ ಕೈಯಲ್ಲಿ ಹೆಂಡದ ಗಡಿಗೆ ಇರುವುದು ಕಂಡು)

**ಸುದರ್ಶನ:**—ಸಹೋದರರೇ, ಏನಿದು. ಪುನಃ ಈ ಮದ್ಯ ಸೇವನೆಯನ್ನೇ ನಿಮ್ಮ ಜೀವನದ ಸರ್ವಸ್ವವನ್ನಾಗಿ ಮಾಡಿಕೊಂಡಿರೊ. ನಾವು ಈ ಮದ್ಯ ಸೇವನೆಯಂಥಾ ಭಯಂಕರ ದುರಭ್ಯಾಸದಲ್ಲಿ ಬಿದ್ದಿರುವುದರಿಂದಲೇ, ಇಂದು ಬಡತನವೆಂಬ ಮಹಾಪ್ರವಾಹದಲ್ಲಿ ಸಿಲುಕಿರುವೆವು. ನಾವೆಲ್ಲರೂ ಒಂದೇ ತಾಯಿ ಮಕ್ಕಳಂತೆ, ಒಂದೇ ಗಿರಣಿಯಲ್ಲಿ ಕೆಲಸ ಮಾಡುವವರು. ಆ ಲಕ್ಷ್ಮಣನು ನಮ್ಮೆಲ್ಲರ ಏಳಿಗೆಗಾಗಿ ನಮಗೆ ಬುದ್ಧಿವಾದಗಳನ್ನು ಹೇಳುತ್ತಿರುವನು ಹೊರತು, ತಾನು ವಿದ್ಯಾವಂತನೆಂಬ ಗರ್ವ

ದಿಂದ ನಮ್ಮೆಲ್ಲರ ಹಾಸ್ಯ ಮಾಡಲಿಕ್ಕಾಗಿಯಲ್ಲ. ಅಣ್ಣಂದಿರಾ, ಈ ಮದ್ಯ ಸೇವನೆಯೆಂಬ ಪಿಶಾಚಿಯ ವಂಚನೆಗೆ ಬಲಿಬೀಳದೆ, ಅದರಿಂದ ದೂರವಾಗಿ, ನಮ್ಮ ಮುಂದಿನ ಜನಾಂಗದ ಏಳಿಗೆಯನ್ನು ಬಯಸೋಣ; ಬಡ ಕೂಲಿ ಯುವರಾದ ನಾವು, ಮಿತಜೀವನವನ್ನು ಸಾಗಿಸಿದರೆ ತಾನೇ ಈ ಪ್ರಥ್ವಿ ಯಲ್ಲಿ ಬಾಳ್ವೆ ಮಾಡಬಲ್ಲೆವು ಹೊರತು, ಈ ಮದ್ಯ, ಇನ್ನು ಬೀಡಿ ಸಿಗರೇಟು ಜುಗಾರಿಯಂಥಾ ದುಷ್ಟ ಚಟಗಳ ಹವ್ಯಾಸಗಳಲ್ಲಿ ಬಿದ್ದರೆ, ಸರ್ವಥಾ ಸುಖ ಜೀವನವನ್ನು ಸಾಗಿಸಲಾರೆವು.

**ಸಿದ್ದ**:—ಹೌದಯ್ಯಾ, ನಮಗೆ ಸಿಗುವಷ್ಟು ಕೂಲಿಯು ನಿನಗೂ ಲಕ್ಷ್ಮಣನಿಗೂ ಸಿಕ್ಕರೂ, ಲಕ್ಷ್ಮಣನೇಕೆ ಸಾಲದಿಂದ ಸಂಕಟ ಪಡುತ್ತಿರುವನು?

**ಸುದರ್ಶನ**:—ಅಣ್ಣಾ, ನೀನು ಹೇಳುವುದು ನಿಜ. ನಮಗೆ ದಿನಕ್ಕೆ ಸಿಗುವ ಕೂಲಿಯು ನಮ್ಮ ದಿನದ ಖರ್ಚಿಗೆ ಸಾಲದಾಗಿದೆ. ಹೀಗಿದ್ದು, ಲಕ್ಷ್ಮಣನು ಹಣವಿಲ್ಲವೆಂದು ದುಃಖಪಡುವುದು ವಾಸ್ತವವೇ. ಅವನ ಹೆಂಡತಿಯು ಜ್ವರಪೀಡಿತಳಾಗಿರುವಳು. ಅದಕ್ಕಾಗಿ ಔಷಧಿ ತರಲು ಹಣ ವಿಲ್ಲದೆ ದುಃಖಪಡುತ್ತಿದ್ದನು. ಇಷ್ಟೇ ಹೊರತು, ಆತನು ನಿಮ್ಮ ಹಾಗೆ ಸಾಲದ ಹೊರೆಯನ್ನೇ ಮಾಡಿಕೊಂಡಿಲ್ಲ. ನಿಮ್ಮ ಹಾಗೆ ಮದ್ಯದಂಗಡಿ ಯವನಿಗೆ ನಿಮ್ಮ ಸರ್ವಸ್ವವನ್ನು ಮಾರಿಕೊಳ್ಳಲಿಲ್ಲ. ಅಣ್ಣಂದಿರಾ, ನೀವಾದರೋ ಇಷ್ಟು ಸಾಲವನ್ನು ಹೇಗೆ ತೀರಿಸಬಲ್ಲಿರಿ? ನಮಗೆ ದಿನಕ್ಕೆ ಸಿಗುವುದು ಬರಿಯ ನಾಲ್ಕಾಣೆ; ಇದರಲ್ಲಿ ಹೆಚ್ಚಿನಂಶವು ಹೆಂಡಕ್ಕೆ ಹೋಗಲಾಗಿ, ಬಾಕಿಯ ಹಣದಿಂದ ಮಡದಿ ಮಕ್ಕಳಿಗೊಂದು ತುತ್ತು ಅನ್ನವನ್ನು ಹೇಗೆ ಹಾಕಬಲ್ಲಿರಿ? ಈ ಹೊರಲಸಾಧ್ಯವಾದ ಸಾಲವನ್ನು ಹೇಗೆ ನಿವಾರಿಸಬಲ್ಲಿರಿ? ಬಂಧುಗಳೇ ವಿಚಾರಿಸಿರಿ.

**ಸಿದ್ದ**:—ನೀವು ಹೇಳುವುದೆಲ್ಲಾ ನಿಜವಿರುತ್ತದೆ. ಆದರೆ . . . . (**ತಲೆ ತುರಿಸಿಕೊಳ್ಳುವನು.**)

**ಸುದರ್ಶನ**:—ಆದರೆ ಬಿಡಲು ಮಾತ್ರ ಆಗುವುದಿಲ್ಲ, ಅಲ್ಲವೆ? ಅಣ್ಣಂದಿರಾ, ಆಗುವುದಿಲ್ಲೆಂದು ಹೇಳಬೇಡಿ. ಸರಕಾರದವರು ಹೆಂಡ

ಶರಾಬು ಮಾರಬಾರದೆಂದು ಕಾನೂನು ಮಾಡಿದಾಗ ನೀವು ಹೇಗೆ ಹೆಂಡ ಕುಡಿಯಬಲ್ಲಿರಿ? ಅಥವಾ ಈ ಸಾಲದ ಹೊರೆಯನ್ನು ತೀರಿಸಲಾರದೆ, ನೀವು ಜೈಲನ್ನು ಸೇರಿದಿರೆಂದರೆ, ಅಲ್ಲಿ ನಿಮಗಾರು ಹೆಂಡವನ್ನೊದಗಿಸ ಬಲ್ಲರು?

**ರಂಗ**:—ಹೌದು ಸುದರ್ಶನಾ, ಇನ್ನು ಹೆಂಡ ಕುಡಿಯುವುದನ್ನು ಕಡಿಮೆ ಮಾಡಲು ಪ್ರಯತ್ನಿಸಿ, ಸದ್ಯದಲ್ಲೇ ಆ ಅಭ್ಯಾಸವನ್ನು ನಿಲ್ಲಿಸಿ ಬಿಡುವೆನು. ಸಿದ್ದಾ, ನಿನ್ನ ಅಭಿಪ್ರಾಯ ಹೇಗೆ?

**ಸಿದ್ದ**:—ನನ್ನ ಹೆಂಡ್ತಿ ಏನು ಹೇಳುವಳೋ ನೋಡಬೇಕು. ಮುಖ್ಯತಾ, ಅವಳ ಅಭಿಪ್ರಾಯವೇ ನನ್ನ ಅಭಿಪ್ರಾಯ. (ಎಲ್ಲರೂ ನಗುವರು.)

**ಸುದರ್ಶನ**:—ಇನ್ನು, ಇಂಥಾ ಸಂಜೆಯ ಸಮಯದಲ್ಲಿ, ನಮ್ಮ ಮನಸ್ಸನ್ನು ಹೆಂಡದಂಗಡಿಗಳಿಗೆ ಎಳೆಯುದಂತೆ ಮಾಡಲು, ಲಕ್ಷ್ಮಣನು ಸದ್ಯದಲ್ಲೇ ಕೂಲಿಕಾರರ ಸಂಘ ನಿರ್ಮಿಸಲಿಕ್ಕಿರುವನು. ಸಂಜೆಯ ಹೊತ್ತನ್ನು ಮದ್ಯಸೇವನೆಯಿಂದ ಹಾಳು ಮಾಡುವ ಬದಲು, ನಾವೆಲ್ಲರೂ ಪ್ರತಿದಿನವೂ ಸಭೆ ಸೇರಿ, ಕೂಲಿಕಾರರ ಏಳಿಗೆಯ ಮಾರ್ಗವನ್ನು ಹುಡುಕೋಣ. ಹೀಗೆ ಮಾಡುವುದರಿಂದ ಇಡೀ ದಿನ ಬೆವರಿಳಿಸುವ ನಮ್ಮಲ್ಲಿ ಜಾಗ್ರತಿ ಹುಟ್ಟುವುದು. ಬಂಧುಗಳೇ, ನೀವೆಲ್ಲರೂ ಕೂಲಿಕಾರರ ಏಳಿಗೆಯನ್ನು ಹಾರೈಸಿ, ಪ್ರತಿ ಸಾಯಂಕಾಲವೂ ಸಭೆಗೆ ಬರಬೇಕೆಂದು ಬೇಡಿಕೊಳ್ಳುತ್ತೇನೆ.

**ರಂಗ**:—ಸುದರ್ಶನಾ, ನಾನು ಅಗತ್ಯವಾಗಿ ಬರುತ್ತೇನೆ. ಸಿದ್ದಾ, ನೀನು ಬರೋದಿಲ್ಲವೇ?

**ಸಿದ್ದ**:—ಯಾವುದಕ್ಕೂ ನನ್ನ ಸ್ವಂತ ಅಭಿಪ್ರಾಯ ಕೊಡಲು ನನಗೆ ಅಧಿಕಾರವಿಲ್ಲ.

(ನಗುತ್ತಾ ಎಲ್ಲರೂ ಸಿದ್ದನನ್ನು ಎಳಕೊಂಡು ಹೋಗುವರು. ಸುದರ್ಶನನು ಅವರನ್ನು ಸ್ವಲ್ಪ ಸಮಯ ನೋಡುತ್ತಿದ್ದು)

**ಸುದರ್ಶನ:**—ಹಾ! ಇಂದು ಕೂಲಿಕಾರರು ಸ್ವಲ್ಪ ಮನಸ್ಸು ತಿರುಗಿಸಿದಂತಿದೆ. ಪರಮಾತ್ಮ, ಇವರಿಗೆ ಸುಬುದ್ಧಿಯನ್ನು ಕೊಟ್ಟು, ಈ ಮದ್ಯ ಸೇವನೆಯಿಂದ ಮುಕ್ತರಾಗುವಂತೆ ಪ್ರೇರೇಪಿಸು. (ಹೋಗುವನು)

---

## ೬. ಸಿದ್ದನ ಗುಡಿಸಲು.

**(ಹರುಕು ಮುರುಕು ಕೋಣೆ; ಒಂದು ಮೂಲೆಯಲ್ಲಿ ಒಂದೆರಡು ಹಸೆ ಮಡಚಿ ಇಡಲ್ಪಟ್ಟಿರುವವು. ಮತ್ತೊಂದು ಕಡೆ ಹಗ್ಗದಲ್ಲಿ, ಸೀರೆ ಅಂಗಿ ಮೊದಲಾದುವನ್ನು ಹಾಕಿರುವರು. ಒಂದೆರಡು ಮಣ್ಣಿನ ಪಾತ್ರೆ ಪೆಟ್ಟಿಗೆ ಮೊದಲಾದುವು ಅಸ್ತವ್ಯಸ್ತವಾಗಿ ಬಿದ್ದಿರುವವು. ಸಿದ್ದನ ಹೆಂಡತಿಯಾದ ಗೌರಿಯು, ಮೂಲೆಯಲ್ಲಿದ್ದ ಕಾಲುಮಣೆಯ ಮೇಲೆ ಕೋಪದಿಂದ ಸ್ತಬ್ಧಳಾಗಿ ಕೂತಿರುವಳು. ಸಿದ್ದನು ಮತ್ತೊಂದು ಮೂಲೆಯಲ್ಲಿ ಗಲ್ಲಕ್ಕೆ ಎರಡು ಕೈಗಳನ್ನೂ ಒತ್ತಿ, ಏನೋ ಆಲೋಚನೆ ಮಾಡುತ್ತಿರುವಂತೆ ಕುಳಿತಿರುವನು. ಅವರಿಬ್ಬರ ಮಗ ರಾಮುವು, ಅವರ ನಡುವೆ ನಿಂತು ಒಮ್ಮೆ ತಾಯಿಯನ್ನೂ ಇನ್ನೊಮ್ಮೆ ತಂದೆಯನ್ನೂ ನೋಡುತ್ತಿರುವನು. ಯಾರೂ ಸಿಟ್ಟಿಂದು ಮಾತಾಡುವುದಿಲ್ಲ. ರಾಮುವಿಗೆ ಬೇಸರ ಬಂದು ತಾಯಿಯನ್ನು ಮಾತಾಡಿಸಲೆಂದು ಆಕೆಯ ಬಳಿಗೆ ಹೋಗಿ)**

**ರಾಮು:**—ಅಮ್ಮಾ, ಅಮ್ಮಾ—ಅಮ್ಮ. (ಆಕೆ ಮಾತಾಡುವುದಿಲ್ಲ. ಅಲ್ಲಿಂದ ತಂದೆಯ ಬಳಿಗೆ ಬಂದು) ಅಪ್ಪಾ, ಅಪ್ಪಾ, ಅಪ್ಪಾ. (ತಂದೆಯೂ ಮೌನ. ರಾಮುವಿಗೆ ಸಿಟ್ಟುಬಂದು ಗೋಡೆಯ ಬಳಿಗೆ ಸರಿದು ಹಗ್ಗದಲ್ಲಿದ್ದ ವಸ್ತ್ರ ಸೀರೆಯೆಲ್ಲವನ್ನೂ ಸಿಕ್ಕ ಕಡೆ ಬಿಸಾಡುವನು. ಮಣ್ಣಿನ ಪಾತ್ರೆ ಚೂರಾಗುವುದು; ಸಿದ್ದನು ಮುಖ ಮಾತ್ರ ತಿರುಗಿಸಿ ರಾಮುವಿನ ಕೆಲಸವನ್ನು ಕಂಡು ಹೆದರಿ ತನ್ನ ಕಿವಿಗೆ ಕೈಹಿಡಿದುಕೊಳ್ಳುವನು)

**ಗೌರಿ:**—(ಫಕ್ಕನೇ ಎದ್ದು ರಾಮುವನ್ನು ದರದರನೇ ಎಳೆದು ಹಾಕಿ ಬೆನ್ನಿಗೆ "ಪಟಪಟ" ಬಡಿಯುವಳು. ಹುಡುಗನು ಆಕಾಶ ಪಾತಾಳ ಒಂದಾಗುವ ರೀತಿ ಬೊಬ್ಬೆ ಹಾಕುವನು. ಸಿದ್ದನಲ್ಲಿದ್ದ ಗೌರಿಯ ಕೋಪ, ರಾಮುವಿನ ಬೆನ್ನಿನ ಮೇಲೆ ರೂಪುಗೊಂಡುದು ಕಂಡು ಸಿದ್ದನು ಇನ್ನೂ ಹೆದರಿ ತನ್ನ ಕಣ್ಣಿಗೆ ಕೈಹಿಡಿಯುವನು. ಗೌರಿ ಉಬ್ಬಸ ತೆಗೆಯುತ್ತಾ ಮುಂಚಿನ ಸ್ಥಾನದಲ್ಲೇ ಕುಳಿತುಕೊಳ್ಳುವಳು.)

**ಸಿದ್ದ:**—(ಸ್ವಲ್ಪ ಸಮಯದ ನಂತರ ಹೆದರುತ್ತಾ) ಮಗೂ, ರಾ—ರಾಮೂ, ಇಲ್ಲಿ-ಬಾ ಮಗೂ . . . .

**ಗೌರಿ**:—(ಕೋಪದಿಂದ) ಹೂಂ, ಮಗೂ.

**ಸಿದ್ದ**:—ಅ-ಅಲ್ಲ-ಅಲ್ಲ; ಮ-ಮಗೂ ಅಂದೆ. (ಒಂದೆರಡು ಹಲ್ಲು ಕಾಣುವ ಹುಸಿ ನಗುವು ಅವನ ಹೆದರಿಕೆಯ ಮುಖದಲ್ಲಿ ತೋರುವುದು.)

**ಗೌರಿ**:—(ಫಕ್ಕನೆ ಕಣ್ಣೀರು ತುಂಬಿ ಅಳುತ್ತಾ) ಈಗ ಬೇಕು ನಿಮಗೆ ಮಗು; ಇಷ್ಟು ಪೆಟ್ಟು ತಿನ್ನುವ ವರೆಗೆ ಸುಮ್ಮನಿದ್ದಿರಿ. (ರಾಮುವನ್ನು ತನ್ನೆಡೆಗೆ ಎಳಕೊಂಡು ತಬ್ಬಿ ಅಳುತ್ತಾ) ಅಯ್ಯೋ ಎಷ್ಟು ಪೆಟ್ಟು ತಿಂದ; ಯಾಕೆ ಹುಟ್ಟಿತಪ್ಪಾ ಇದೆಲ್ಲಾ, ಪೆಟ್ಟು ತಿಂದು ಸಾಯಲಿಕ್ಕೆ.

**ಸಿದ್ದ**:—(ಅದೆ ನಡುಕದ ದನಿಯಿಂದ) ನೀನೇಕೆ ಹುಟ್ಟಿದ್ದು,—ಪೆಟ್ಟು ಕೊಟ್ಟು ಸಾಯಲಿಕ್ಕೊ?

**ಗೌರಿ**:—(ದುಃಖವು ಕ್ಷಣದೊಳಗೆ ಮಾಯವಾಗಿ) ಹೂಂ, ಏನು? ಸಾಯ ಬೇಕೆ? ನಾನು!—ಯಾಕೆ ನನ್ನನ್ನು ಮದುವೆಯಾದುದು. ಇವರಿಗೆ ನನ್ನನ್ನು ಯಾಕೆ ಮದುವೆ ಮಾಡಿಕೊಟ್ಟರೋ.—ನನಗೊಂದು ಸಾವಾ ದರೂ ಬರಬಹುದಿತ್ತಲ್ಲಾ ದೇವರೇ.

**ಸಿದ್ದ**:—(ತುಸು ಅಧಿಕಾರ ದನಿಯಿಂದ) ಸಾವು ಬರುವುದಾದರೆ, ಕೈ ಯಲ್ಲಿ ಹಣ ಕಮ್ಮಿಯಾದ ಈ ಸಮಯದಲ್ಲಿ ಬರುವುದು ಬೇಡ. ಕೈ ಯಲ್ಲಿ ಸ್ವಲ್ಪ ಹಣ ಆಗಲಿ. ಮತ್ತೆ ಬೇಕಾದರೆ ಸಾಯು. ಅಲ್ಲ ನಿನ ಗೊಂದು ಶ್ರಾದ್ಧ ಆದರೂ ಮಾಡಿಸಬೇಕಲ್ಲವೇ.

**ಗೌರಿ**:—ಏನು? ಏನು? ಪುನಃ ಸಾಯಬೇಕೆ? ನಾನು ಹೋದರೆ ನಿಮಗೆ ಸುಖಾ ಆದೀತು. ಇವರ ಮನಸ್ಸೇ. (ಅಳುತ್ತಾ) ಹೊತ್ತಿಗೆ ಅನ್ನ ಇಲ್ಲದೆ ಇಲ್ಲಿ ಇರೋದಕ್ಕಿಂತ ಸಾಯುವುದೇ ಲೇಸು.

**ಸಿದ್ದ**:—ನೀನು ಸತ್ತರೆ, ನನ್ನ ತಲೆಯಲ್ಲಿದ್ದ ಒಂದು ಹೊರೆ ಇಳಿದ ಹಾಗಾದೀತು. ನಿನ್ನಂಥಾ ಹೆಂಡತಿಯೊಂದಿಗೆ ಇರೋದಕ್ಕಿಂತ, ನನ್ನಂಥಾ ಗಂಡ, ಒಂದು ಮಾರಾದರೂ ಹಗ್ಗ ತಕ್ಕೊಂಡು ಸಾಯೋದು ಒಳ್ಳಿತು. (ಗೌರಿಗೆ ಬೆನ್ನು ಮಾಡಿ ಕುಳಿತುಕೊಳ್ಳುವನು)

**ಗೌರಿ:**—(ಸಿದ್ದನನ್ನು ದುರದುರನೆ ನೋಡಿ) ಏನು? ಸುಮ್ಮನೆ ಇದ್ದೇನೆಂದು ಮಾತು ತುಂಬಾ ಬೆಳೆಯುತ್ತದಲ್ಲವೇ? (ಗೌರಿಯು ಸಿಡುಕಿನ ಮಾತು ಕೇಳಿ ಸಿದ್ದನು ಒಮ್ಮೆಗೆ ಬೆಚ್ಚಿ ಬೀಳುವನು) ಹೇಳಿರಿ, ನನ್ನಿಂದ ನಿಮಗೆ ಏನು ತೊಂದರೆ ಆಯ್ತುಂತ. ಹೆಂಡ್ತಿಮಕ್ಕಳನ್ನು ಸಾಕಲಿಕ್ಕಾಗದ ನೀವೂ ಒಬ್ಬ ಗಂಡಸು. ನೀವೂ ಮದುವೆಯಾಗುವುದು. ಇಸ್ಸಪ್ಪಾ, ಗಿರಣಿಯಲ್ಲಿ ದುಡಿದುದೆಲ್ಲವನ್ನೂ ಹೆಂಡಕುಡಿದು, ಮನೆಗೆ ಬರೀ ಕೈಯಲ್ಲಿ ಬರುತ್ತೀರಿ. ಇಲ್ಲಿ ಬಂದು ಒಣ ಪೌರುಷ ತೋರಿಸುತ್ತೀರಿ. ನಡೆಯಲಾರದು ನಿಮ್ಮ ಹಿತ್ತಾಳಿ ಇಲ್ಲಿ. ಒಳ್ಳೇ ಮಾತಿನಿಂದ ಹಣ ತಂದುಕೊಡಿ; ಇಲ್ಲವಾದರೆ ಮನೆ ಮೆಟ್ಲು ಹತ್ತಲು ಬಿಡಲಿಕ್ಕಿಲ್ಲ, ಹೂಂ.

**ಸಿದ್ದ:**—ಏನು ಮಾಡೋದು ಗೌರೀ; ನಿನಗೆಲ್ಲಾ ಗೊತ್ತಿದೆ, ನಮಗೆಲ್ಲಾ ಕೂಲಿ ಬಹಳ ಕಮ್ಮಿ ಸಿಗೋದೆಂದು. ನಮ್ಮ ಖರ್ಚಿಗೇ ಸಾಕಾಗೋದಿಲ್ಲ. ಮತ್ತು ಮನೆಗೆ ಏನು ತರಲಿ?

**ಗೌರಿ:**—(ಹೀಯಾಳಿಸುತ್ತಾ) ಮನೆಗೆ ಏನು ತರಲಿ; ಮತ್ತು ಮದುವೆಯಾದುದು ಯಾಕೆ? ಮನೆಯಲ್ಲಿರುವವರೆಲ್ಲಾ ಮರದ ಕೊರಡುಗಳೆಂದು ನೆನಸಿರುವಿರಾ? ಹೆಂಡ ಕುಡಿಯದೆ ಇದ್ದರೆ, ನಿಮ್ಮದೇನು ಪ್ರಾಣಹಾರಿ ಹೋಗುತ್ತದೆಯೆ? ಮನೆಯಲ್ಲಿ ಅಕ್ಕಿ ಇಲ್ಲ. ನಿನ್ನೆ ರಾತ್ರಿ ಒಂದಿಷ್ಟು ಹೊಟ್ಟೆಗೆ ಹಾಕಿದ್ದು, ಎಂದೋ ಕರಗಿಹೋಗಿದೆ. ನಿಮಗೇನು? ಯಾರ್‍ಯಾರ ಒಟ್ಟಿಗೆ ಕೂಡಿಕೊಂಡು ಹೊಟ್ಟೆ ತುಂಬಿಸಿರಿ. ಹೆಂಡ್ತಿಮಕ್ಕಳು ಉಪವಾಸ ಬಿದ್ದು ಸತ್ತರೂ ಗೊತ್ತಿಲ್ಲ. ಹೋಗಿ, ಎರಡು ಸೇರು ಅಕ್ಕಿ ತನ್ನಿ.

**ಸಿದ್ದ:**—ಹಣವಿಲ್ಲ ಮಾದೇವಿ.

**ಗೌರಿ:**—ನನಗೊತ್ತಿಲ್ಲ. ಹಣವಿಲ್ಲಾದರೆ ಹಗ್ಗತಕ್ಕೊಳ್ಳಿ. ಒಳ್ಳೆ ಮಾತಿನಿಂದ ಹೇಳುತ್ತೇನೆ. ನನಗೆ ಸಿಟ್ಟು ಬಂದರೆ ನಾಯಿಗೆ ಕೂಡಾ ಬೇಡ ನಾನು—ಕಂಡಾಬಟ್ಟೆ ಬಯ್ದೇನು. ನನ್ನದು ಗೊತ್ತಿಲ್ಲ ನಿಮಗೆ. ಹೋಗಿ ರಾತ್ರಿಯ ಊಟಕ್ಕಾದರೂ ಅಕ್ಕಿ ತರಬೇಕು. ಇಲ್ಲವಾದರೆ ಖಂಡಿತವಾಗಿಯೂ ಮನೆ ಹೊಕ್ಕಲಿಕ್ಕೆ ಬಿಡೋದಿಲ್ಲ.

**ಸಿದ್ದ**:—(ಗಂಡಸಿಗಿರುವ ಅಧಿಕಾರವನ್ನು ತೋರಿಸಲೆಂದು) ನಾನು ತರೋದಿಲ್ಲ . . . .

**ಗೌರಿ**:—(ತಟ್ಟನೆ) ಏನು! ತರೋದಿಲ್ಲವೇ. (ಫಕ್ಕನೆ ಎದ್ದು ನಿಲ್ಲುವಳು. ಸಿದ್ದನು ಹೆದರಿ ಕಣ್ಣಿಗೆ ಕೈಹಿಡಿದು)

**ಸಿದ್ದ**:— ತ-ತ-ತರುತ್ತೇನೆ. ನಿನ್ನಾಣೆ ತ-ತರುತ್ತೇನೆ . . . . ಸ್ವಲ್ಪ ಸಮಾಧಾನ ಮಾಡಿಕೊಳ್ಳು. (ಗೌರಿ ಸುಮ್ಮಗಾಗುವಳು. ಸಿದ್ದನು ಹರಕು ಮುಂಡಾಸು, ಒಂದು ಹರಕು ಕೊಡೆ ಎಲ್ಲಾ ಹಿಡಿದುಕೊಂಡು ಮೆಲ್ಲನೇ ಹೋಗುವನು. ಅಷ್ಟರ ವರೆಗೆ ಸುಮ್ಮನಿದ್ದು ತಾಯಿತಂದೆಗಳ ನಡವಳಿಕೆಗಳನ್ನು ನೋಡುತ್ತಿದ್ದ ರಾಮುವು ತಾಯಿಯನ್ನುದ್ದೇಶಿಸಿ)

**ರಾಮು**:—ಅಮ್ಮಾ; ನೀನು ಅಮ್ಮನಾಗುವ ಬದಲು, ಅಪ್ಪನಾಗುತ್ತಿದ್ದರೆ ಸರಿ ಬೀಳುತ್ತಿತ್ತು. (ನಗುವನು.)

**ಗೌರಿ**:—(ಕೋಪ ಬಂದು) ಮುಂಗ ಏನಂದೆ. (ಹೊಡಿಯಲು ಮುಂದಾಗುವಳು. ರಾಮುವು ತೆರೆಗೆ ಓಡುವನು. ಗೌರಿ ಆತನನ್ನು ಹಿಂಬಾಲಿಸುವಳು)

---

## ೬. ಮಾರ್ಗ.

(ಸಿದ್ದನು ಚಿಂತಾಕುಲನಾಗಿ ಪ್ರವೇಶಿಸುವನು)

ಕಲ್ಯಾಣಿ— ಆದಿತಾಳ.

**ಸಿದ್ದ**:— ಕಷ್ಟ—ನಷ್ಟ—ಭ್ರಷ್ಟ ।
ಜೀವನ—ಕಷ್ಟ—ನಷ್ಟ—ಭ್ರಷ್ಟ ॥
ಗಂಡಗಿಂತ ಹೆಂಡತಿ ಜೋರಾದರೆ ।
ಕಷ್ಟ—ನಷ್ಟ—ಭ್ರಷ್ಟಾ—॥
ಗಂಡ ಹೆಂಡತಿಗೆ— ಹೆದರೋದೆಂದರೆ ।
ಹೆಂಡತಿ ಗಂಡಗೆ—ಹೊಡೆಯೋದೆಂದರೆ ।
ಗಂಡನಾದವನ ಜನ್ಮವೆ ದಂಡಾ ॥

ಮನೆಯಲ್ಲಾದರೂ ಸ್ವಲ್ಪ ನೆಮ್ಮದಿಯಲ್ಲಿರಬಹುದೆಂದರೆ, ಆ ಮಹಾಕಾಳಿಯೊಬ್ಬಳು ಬಿಡೋದಿಲ್ಲ. ಹೆಂಡ್ತಿಗೆ ಹೆದರಿ ನಡೆಯುವ ಕಾಲ ಬಂತಲ್ಲಾ ದೇವರೆ. ನಾನು ಗಂಡಸಾಗುವ ಬದಲು, ಹೆಂಗ

ಸಾಗುತ್ತಿದ್ದರೆ ನಾನೂ, ನನ್ನ ಗೌರಿಯಂತೆ ಅಧಿಕಾರ ತೋರಿಸುತ್ತಿದ್ದೆ. ನನ್ನ ಮಿತ್ರರೆಲ್ಲರೂ ನಾನು 'ದೊಡ್ಡ ಮನುಷ್ಯ'ನೆಂದೂ, ನನ್ನ ಹೆಂಡ್ತಿ ನನಗೆ ಹೆದರಿ ನಡೆಯುವಳೆಂದೂ ತಿಳಿದಿರುವರು. ಅವರಿಗೆ ನನ್ನ ನಿಜವಾದ ಅವಸ್ಥೆಯು ತಿಳಿದರೆ ನನ್ನನ್ನು ಹಂಗಿಸಿ ಹಣ್ಣು ಮಾಡದೆ ಬಿಡರು. (ಸ್ವಲ್ಪ ಚಿಂತಿಸಿ) ಪೂರ್ವಜನ್ಮದಲ್ಲಿ ನಾನು ನನ್ನ ಹೆಂಡ್ತಿಯನ್ನು ಬಹಳ ಕ್ರೂರತನದಿಂದ ನೋಡಿರಬೇಕು. ಆದ್ದರಿಂದ ಈ ಜನ್ಮದಲ್ಲಿ ಪತ್ನೀದಾಸನಾಗುವ ಈ ಪುಣ್ಯವು ನನಗೆ ಬಂದಿರುವುದು. ದೇವರೇ, ಕೊಡಬಾರದಪ್ಪಾ ಇಂಥಾ ಪುಣ್ಯ ನನಗೆ. ಸಿಗಬಾರದಪ್ಪಾ ಯಾರಿಗೂ ಇಂಥಾ ಸುಖ. ದೇವರೇ, ನೀನು ನನಗೆ ಇಷ್ಟು ತಾಳ್ಮೆಯನ್ನು ಕೊಟ್ಟುದೇ ಉಪಕಾರವಾಯಿತು. ಇಲ್ಲವಾದರೆ, ಸತ್ತೇ ಬೀಳಬೇಕಿತ್ತು . . . . ಅವಳಲ್ಲ, ನಾ-ನು. ಅಷ್ಟು ಪ್ರಭಾವ ಅವಳದು. ಬರುವ ಜನ್ಮದಲ್ಲಾದರೂ, ನಾನು ಹೇಳುವಂತೆ ಕೇಳುವ ಹೆಂಡ್ತಿ ನನಗೆ ಸಿಕ್ಕಲಿ. (ಏನೋ ಆಲೋಚನೆ ಮಾಡುವವನಂತೆ ನಟಿಸಿ) ಈಗ ಹಣ ಎಲ್ಲಿಂದ ತರಲಿ. ಮ್ಯಾನೆಜರನಿಂದ ಕೂಲಿ ಇನ್ನೂ ಸಿಗಲಿಲ್ಲ. ಅಕ್ಕಿ ತಾರದೆ ಮನೆಗೆ ಕಾಲಿಡಬಾರದೆಂದು ನನ್ನ 'ಮೆಮ್‌ಸಾಹೇಬ'ಳು ಅಂಗಲಾಚಿ ಬೇಡಿಕೊಂಡಿರುವಳು. ನಾನು ಉಪವಾಸ ಬೀಳುವುದೆಂದರೆ, ಅವಳ ಹೊಟ್ಟೆಯಲ್ಲಿ ಉರಿ ಏಳುವುದು; ಅಂಥಾ ಪತಿವ್ರತೆ ಆಕೆ; ಗಂಡನನ್ನು ಮನೆಯಿಂದ ಓಡಿಸಿಯಾದರೂ, ಪತಿವ್ರತಾ ಧರ್ಮವನ್ನು ಪಾಲಿಸುವಳು. ಆಗಲಿ, ಏನಾದರೂ ಮಾಡುತ್ತೇನೆ. ಇಲ್ಲವಾದರೆ 'ಸ್ತ್ರೀ ಸಂಕಾರ'ದ ವಿರೋಧವಾಗಿ ವರ್ತಿಸಿದುದರ ಫಲವಾಗಿ ಆಕೆ ಕೊಡುವ ಶಿಕ್ಷೆಗೆ ಗುರಿಯಾಗಬೇಕಾದೀತು.

(ಹೋಗುವನು.)

---

## ೮. ವಿಲ್ ಓನರ್ಸ್ ಕ್ಲಬ್.

(ಮೆಂಬರರು ಮೇಜಿನ ಸುತ್ತಲೂ ಕುಳಿತಿರುವರು. ಕ್ಲಬ್ಬಿನ ಸಿಪಾಯಿಯು ಒಂದು ಕಡೆ ದಕ್ಷತೆಯಿಂದ ನಿಂತಿರುವನು. ಕೆಲವರು ವರ್ತಮಾನ ಪತ್ರಿಕೆಗಳನ್ನು ಓದುತ್ತಿರುವರು. ಹುಡುಗನೊಬ್ಬನು ಸಿಗರೇಟು ಡಬ್ಬಿ ತಗೊಂಡು ಎಲ್ಲರ ಬಳಿಗೂ ಹೋಗುತ್ತಲಿದ್ದಾನೆ. ಬಡವರ ಮೇಲೆ ತಿರಸ್ಕಾರ, ತಮ್ಮ ಸುಖ ಲಾಲಸೆ ಇವುಗಳ ಚಿಹ್ನೆಗಳು ಎಲ್ಲರ ಮುಖಗಳಲ್ಲೂ ಕಾಣುತ್ತವೆ.)

**ರಮಾನಂದರಾವ್**:—ಏನು, ಜಗಜೀವನರಾಯರು ಇನ್ನೂ ಬಂದಿಲ್ಲ!

**ಲತೀಫ್ ಖಾನ್**:—ಅವರ ಬೆಂಗಳೂರು ಗಿರಣೀ ಕೂಲಿಕಾರರು ಮುಷ್ಕರ ಮಾಡಿರುವರಲ್ಲವೇ? ಅದೇನೊ ಸ್ವಲ್ಪ ವಿಪರೀತಾವಸ್ಥೆಗೆ ಹೋದ ಹಾಗೆ ತೋರುತ್ತದೆ. ಅವರು ಆ ಗೊಂದಲದಲ್ಲೇ ಬಿದ್ದಿರಬೇಕು.

**ರಮಾನಂದ**:—ಮುಷ್ಕರಕ್ಕೆ ಕಾರಣವೇನು? ಜಗಜೀವನರಾಯರ ಗಿರಣಿಗಳು ಬಹಳ ಸುವ್ಯವಸ್ಥಿತ ರೀತಿಯಿಂದ ನಡೆಸಲ್ಪಡುವವುಗಳೆಂದು ದೇಶದಲ್ಲೆಲ್ಲಾ ಪ್ರಖ್ಯಾತಿಯಿದೆ. ಹೀಗೆ ಹ್ಯಾಗಾಯಿತು, ಖಾನ್ ಸಾಹೇಬರೇ?

**ಲತೀಫ್**:—ಸುವ್ಯವಸ್ಥೆ ಹೋಗಿ ಅವ್ಯವಸ್ಥೆಯಾಗಿದೆ ಈಗ. ಅವರ ಗಿರಣಿಯಲ್ಲಿ ಒಂದೆರಡು ವಿದ್ಯಾವಂತರು ಸೇರಿಕೊಂಡಿದ್ದಾರೆ. ಈ ಅರ್ಧ ಕಲಿತ ಜನರು, ಅಲ್ಲಸಲ್ಲದ ತತ್ವಗಳನ್ನು ಕೂಲಿಕಾರರಿಗೆ ಬೋಧಿಸಿ, ಅವರ ಮನಸ್ಸನ್ನೇ ಹಾಳು ಮಾಡಿ ಬಿಟ್ಟಿದ್ದಾರೆ. ನನಗೆ ಮೊದಲೇ ಗೊತ್ತಿತ್ತು ಹೀಗಾದೀತು ಅಂತ. ಅವರಿಗೆ ಆಗ ಗೊತ್ತಾಗಲಿಲ್ಲ. ವಿದ್ಯಾವಂತರು, ಕಾರಕೂನರಾಗಿ ಪೇನು ಓಡಿಸುವುದರ ಬದಲು, ಗಿರಣಿಯ ಕೆಲಸಕ್ಕೆ ಬಂದರೆ, ವಿದ್ಯಾವಂತರ ನಿರುದ್ಯೋಗ ಸಮಸ್ಯೆಯು ದೂರಾದೀತು, ಕೂಲಿಕಾರರ ಸ್ಥಿತಿಯೂ ಸುಧಾರಿಸೀತು, ಹೀಗೆಲ್ಲಾ ಕಾಲೇಜಿನಲ್ಲಿ ಕಲಿತ ತತ್ವಗಳನ್ನು ನನಗೆನೇ ಬೋಧಿಸಲು ಆರಂಭಿಸಿದರು.

**ರಮಾನಂದ**:—ವಿದ್ಯೆ ಬುದ್ಧಿ ಇದ್ದರೂ, ರಾವ್‌ಬಹದೂರರಿಗೆ ಲೋಕಾನುಭವ ಕಡಿಮೆ. ಪುಸ್ತಕಗಳಲ್ಲಿದ್ದ ಧ್ಯೇಯಗಳು, 'ಆರ್ಮ್‌ಚೆಯರಿ'ನಲ್ಲಲ್ಲದೆ, ಆಚರಣೆಯಲ್ಲಿ ತರಲು ಸಾಧ್ಯವಿದೆಯೇ?

**ಲತೀಫ್**:—ಆ ಪಾಠ ಈಗ ಕಲಿಯಬೇಕು ಜಗಜೀವನರಾಯರು. ಸ್ವದೇಶೀ ಚಳವಳದಿಂದಾಗಿ ಲಾಭವು ಇಮ್ಮಡಿಯಾಗಿದೆ. ಆದುದರಿಂದ, ಕಳೆದ ವರ್ಷ ಲಾಭವಿಲ್ಲವೆಂದು ಕಡಿಮೆ ಮಾಡಿದ್ದ ತಮ್ಮ ಕೂಲಿಯನ್ನು, ಪುನಃ ಏರಿಸಬೇಕೆಂಬುದೇ ಕೂಲಿಕಾರರ ಶರ್ತವಂತೆ.

**ರಮಾನಂದ**:—ನಮಗೆ ಸಿಗುವ ಲಾಭ ಹೆಚ್ಚಿದೆಯೆಂದು ಈ ಗೊಡು ಕೂಲಿಕಾರರಿಗೆ ಯಾರು ಹೇಳಿದರು?

**ಲತೀಫ್**:—ಅದೇ ನಾನು ಹೇಳಿದೆನಲ್ಲಾ, ಆ ಅರ್ಧ ಕಲಿತ ಹೊಸ ಜನರು ಅಂತ. ಅವರೇ ಎಲ್ಲಾ ಹೇಳಿಕೊಟ್ಟವರು. ಹುಚ್ಚು ಮುಂಡೇ ಮಕ್ಕಳು. ನಮಗೆ ಲಾಭ ಸಿಕ್ಕಿದರೆ, ಇವರಿಗೂ ಪಾಲು ಕೊಡಬೇಕಂತೆ. ನಾವು ಒಪ್ಪತ್ತು ಗಂಜಿ ಕೊಟ್ಟ ಉಪಕಾರವಿಲ್ಲ ಇವರಿಗೆ.

**ವಿದ್ಯಾಧರ**:—ಅವರು ಇಡೀ ದಿನ ದುಡಿದರಲ್ಲವೇ, ನಾವು ಮೋಟಾರುಕಾರಿನಲ್ಲಿ ತಿರುಗಿ, ಕ್ಲಬ್ಬಿನಲ್ಲಿ 'ಮಜಾ' ಮಾಡುವುದು. ಜನರು ಸ್ವದೇಶೀ ವಸ್ತುಗಳ ಮೇಲಿನ ಪ್ರೇಮದಿಂದ, ನಮ್ಮ ಮ್ಹಾಲುಗಳಿಗೆ ಹಣ ಹೆಚ್ಚು ತೆತ್ತು, ನಮಗೆ ಅಪಾರ ಲಾಭ ಒದಗಿಸಿ ಕೊಡುವಾಗ, ನಮಗಾಗಿ ದುಡಿಯುವ ಕೂಲಿಕಾರರಿಗೆ, ಕೂಲಿ ಜಾಸ್ತಿ ಮಾಡದಿರುವುದು ಅನ್ಯಾಯ ವಲ್ಲವೇ?

**ಲತೀಫ್**:—ಇವರೊಬ್ಬರು ದೇಶಭಕ್ತರು. ನಮ್ಮ ಗಿರಣಿಗಳ ಶಾಂತತೆಯು ಹಾಳಾಗಲಿಕ್ಕೆ, ಕೂಲಿಕಾರರಷ್ಟೆ ಇಂಥಾ ಗಿರಣೀ ಮಾಲ ಕರೂ ಜವಾಬ್ದಾರರು. ಇವರ ಗಿರಣಿಯಲ್ಲಿ ಕೂಲಿಕಾರರ ಕೂಲಿ ಹೆಚ್ಚಿ ಸಿದ್ದಾರಂತೆ. ಒಬ್ಬಿಬ್ಬರು ಈ ರೀತಿ ಮಾಡಿದ್ದರಿಂದಲೆ ಬಾಕಿ ಕೂಲಿ ಕಾರರೂ ಹೆಚ್ಚು ಕೂಲಿ ಕೇಳುವುದು. ಇಂಥಾ ದ್ರೋಹಿಗಳನ್ನು ನಾವು ಭಹಿಷ್ಕರಿಸಲಿಕ್ಕೇ ಬೇಕು.

**ರಮಾನಂದ**:—ಸರಿ, ಸರಿ; ನಮ್ಮನ್ನು ಯಾರನ್ನೂ ಕೇಳದೆ, ಕೂಲಿ ಕಾರರ ಕೂಲಿಹೆಚ್ಚಿಸಿದ ವಿದ್ಯಾಧರರಾಯರನ್ನು ನಾವೆಲ್ಲರೂ ಬಹಿಷ್ಕರಿಸ ಬೇಕು.

**ಇತರ ಮೆಂಬರರು**:—ಸರಿ, ಸರಿ; ಅವರ 'ಮೆಂಬರ್ ಶಿಪ್ಪ'ನ್ನು ರದ್ದು ಮಾಡಬೇಕು.

**ಲತೀಫ್**:—ಸಿಪಾಯಿ, ಇನಕೊ ಹಕಾಲ್ದೊ, ಜಲ್ದಿ.

**ಎಲ್ಲರೂ**:—ಹೂಂ; ಜಲ್ದಿ, ಜಲ್ದಿ.

(ಸಿಪಾಯಿ ದಿಕ್ಕುಗಾಣದೆ ವಿದ್ಯಾಧರನ ಬಳಿಗೆ ಹೋಗಿ ನಿಲ್ಲುವನು. ಅವನಿಗೆ ಏನುಮಾಡಲೆಂದು ತೋಚುವುದಿಲ್ಲ.)

**ಎಲ್ಲರೂ:**—(ಏಕಕಂಠದಿಂದ) ಜಲ್ದಿ ಹಕಾಲ್ರೊ. (ಸಿಪಾಯಿ ಅಲ್ಲೇ ನಿಲ್ಲುವನು. ಅಷ್ಟರಲ್ಲಿ ರಾವ್‌ಬಹದ್ದೂರರೂ, ಕ್ಲಬ್ಬಿನ ಸಮರ್ಥ ಅಧ್ಯಕ್ಷರೂ ಆದ ಜಗಜೀವನರಾಯರು ಪ್ರವೇಶಿಸುವರು. ಸದಸ್ಯರೆಲ್ಲ ಎದ್ದು ನಿಂತು ನಮಸ್ಕರಿಸುವರು. ರಾಯರು ಪ್ರತಿ ನಮಸ್ಕರಿಸುತ್ತ ತನಗಾಗಿ ಸಿದ್ಧಪಡಿಸಿದ ಆಸನದಲ್ಲಿ ಕುಳಿತುಕೊಂಡು)

**ಜಗಜೀವನ:**—ಏನಿದು ಗಲಾಟೆ?

**ರಮಾನಂದ:**—ಈ ವಿದ್ಯಾಧರರಾಯರು, ತಮ್ಮ ಗಿರಣಿಯ ಕೂಲಿಕಾರರಿಗೆ, ನಮ್ಮೆಲ್ಲರ ಅನುಮತಿಯಿಲ್ಲದೆ ಕೂಲಿ ಹೆಚ್ಚಿಸಿದ್ದಾರೆ. ಅಂಥಾ ದ್ರೋಹಿಯನ್ನು, ಮಿಲ್ ಓನರ್ಸ್ ಕ್ಲಬ್ಬಿನ ಸದಸ್ಯತನದಿಂದ ತೆಗೆದು ಹಾಕಬೇಕೆಂದು ನಾವು ಸರ್ವಾನುಮತದಿಂದ ಠರಾವು ಮಾಡಿದ್ದೇವೆ. ಅದನ್ನು ಜ್ಯಾರಿಯಲ್ಲಿ ತರಲು ಸಿಪಾಯಿಗೆ ಹೇಳಿದ್ದು ಇಷ್ಟೇ.

**ಜಗಜೀವನ:**—(ನಕ್ಕು) ಇಷ್ಟೇ ಏನು? ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೇಕೆ? ವಿದ್ಯಾಧರರಾಯರನ್ನು ಹೊರಗೆ ಹಾಕಿದರೆ, ಅವರು ಊರ ಜನರಲ್ಲಿ ಕೋಲಾಹಲವೆಬ್ಬಿಸಿ, ನಮ್ಮ ಮೇಲೆ ಜನರು ರೇಗಿ ಬೀಳುವಂತೆ ಮಾಡಬಹುದು. ವಿದ್ಯಾಧರರಿಗೆ ಬುದ್ಧಿ ಕಲಿಸುವ ಸುಲಭ ಸಾಧನವು ನನ್ನಲ್ಲಿದೆ.

**ಎಲ್ಲರೂ:**—(ಆತುರತೆಯಿಂದ) ಅದಾವುದು? ಅದಾವುದು?

**ಜಗ:**—ಅವರ ಇಡೀ ಗಿರಣಿಯು ನನಗೆ ಅಡವು ಇದೆ. ಅವರು ಕೂಲಿಕಾರರಿಗೆ ಹೆಚ್ಚಿಸಿದ ಕೂಲಿಯನ್ನು ಕಡಿಮೆಮಾಡದಿದ್ದರೆ, ಅವರ ಗಿರಣಿಯನ್ನು ಏಲಮ್ಮಿಗೆ ಇಡಿಸಿ, ನಾನೇ ಕೊಂಡುಕೊಳ್ಳುತ್ತೇನೆ.

**ಎಲ್ಲರೂ:**—ಯೋಗ್ಯ, ಯೋಗ್ಯ ಉಪಾಯ.

**ಜಗಜೀವನ:**—(ಸಿಪಾಯಿ ತಂದುಕೊಟ್ಟ ಸಿಗರೇಟಿಗೆ ಬೆಂಕಿ ಹೊತ್ತಿಸಿ ನಿಧಾನವಾಗಿ ಉಂಗುರಾಕಾರದ ಹೊಗೆಯನ್ನು ಹೊರಹಾಕುತ್ತಾ) ಮತ್ತೇನು ಸಮಾಚಾರ? ನಾನು ಊರಲ್ಲಿಲ್ಲದೆ ಬಹಳ ದಿನಗಳಾದುವು. ಎಲ್ಲಾ ಕ್ಷೇಮವೇ?

**ಲತೀಫ್**:—ಇಷ್ಟರ ವರೆಗೆ ಕ್ಷೇಮವೆ. ನಿಮ್ಮ ಬೆಂಗಳೂರಿನ ಗಿರಣಿ ಮುಷ್ಕರವೇನಾಯಿತು.

**ಜಗಜೀವನ**:—ಅದೇನೊ ಕೆಲವು ಪುಂಡರ ಪುಂಡಾಟಿಕೆ. ಅವರ ಆಟವೇನೂ ಸಾಗಲಿಲ್ಲ. ಗಿರಣಿಯು ನನ್ನ ಯುರೋಪಿಯನ್ ಮೆನೆಜರನು ಉಕ್ಕಿನ ಕೈಯುವನಾದುದರಿಂದ, ಮುಷ್ಕರವನ್ನು ಬಲತ್ಕಾರದಿಂದ ಅಡಗಿಸಿ ಬಿಟ್ಟನು. ಪೋಲೀಸರ ಸಹಾಯದಿಂದ, ಮುಂದಾಳುಗಳಿಗೆ ಜೈಲಿನ ದಾರಿ ತೋರಿಸಿದ್ದೇ ತಡ; ದಿಕ್ಕುಗಾಣದೆ, ಧೈರ್ಯಗುಂದಿ, ಕೂಲಿಕಾರರು ಶರಣು ಬಂದರು. ಮುಷ್ಕರದ ಸಮಯಲ್ಲಿ ಮಾಡಿದ ಅವನ ಪ್ರಯತ್ನಗಳಿಗಾಗಿ, ಮೆನೆಜರನಿಗೆ ನೂರು ರೂಪಾಯಿ ಸಂಬಳ ಏರಿಸಿ ಬಂದೆ.

**ಲತೀಫ್**:—ಮುಷ್ಕರಕ್ಕೆ ಕಾರಣವೇನು?

**ಜಗಜೀವನ**:—ಕಾರಣವೇನು? ಕೂಲಿ ಹೆಚ್ಚು ದೊರೆಯ ಬೇಕೆಂಬುದೇ ಕಾರಣ. ಭಾಂಡವಾಲಗಾರರಾದ ನಾವು, ಇಂಥಾ ಮಾತು ಗಳನ್ನು ಮನ್ನಿಸುವುದೆಂದರೆ, ನಮ್ಮ ಮರ್ಯಾದೆಗೆ ಕುಂದಲ್ಲದೆ ಮತ್ತೇನು? ಹೋಗಲಿ, ಮಿತ್ರರೇ, ಈಗಿನ ಈ ಸ್ವದೇಶೀ ಚಳವಳದಿಂದಾಗಿ ದೇಶೀಯ ಗಿರಣಿಗಳ ಅರಿವೆಗಳಿಗೆ ಹೆಚ್ಚಿನ ಪ್ರೋತ್ಸಾಹ ಸಿಗುವುದರಲ್ಲಿದೆ. ಇಂಥಾ ಸಮಯವೇ, ನಾವು ಹಣಗಳಿಸಬೇಕಾದ ಸಮಯ. ಇದರ ಕುರಿತು ನಿಮ್ಮ ಕೂಡೆ ಆಲೋಚನೆ ಮಾಡಬೇಕೆಂದೇ, ಇಂದು ವಿಶೇಷ ಸಭೆ ಜರಗುವ ಏರ್ಪಾಡು ಮಾಡಿದ್ದೆ. ಮೊದಲನೆಯದೆಂದರೆ, ಪರದೇಶಗಳಿಂದ ತರಿಸಿ, ಗಿರಾಕಿಯಿಲ್ಲದೆ, ರಾಶಿರಾಶಿಯಾಗಿ ಬಿದ್ದಿರುವ ವಸ್ತ್ರವನ್ನು, ಶುದ್ಧ ಸ್ವದೇಶಿ ಎಂಬ ಮೊಹರು ಹೊಡೆದು, ನಮ್ಮ ಗಿರಣಿಯು ಅರಿವೆಯೆಂದು ಮಾರ ಬೇಕು. ಮತ್ತು, ಕೈ ಮಗ್ಗದ ಖಾದಿ ಬಟ್ಟೆಯನ್ನು ಹೋಲುವ, ಸ್ವಲ್ಪ ದಪ್ಪದ ವಸ್ತ್ರವನ್ನು ತಯಾರಿಸಿ, ಮಿಲ್ ಖಾದಿಯೆಂದು ಅದನ್ನು ಹಳ್ಳಿಪಳ್ಳಿ ಗಳಲ್ಲಿ ವಿಕ್ರಯಿಸಬೇಕು. ಇಂಥಾ ಸಮಯವನ್ನು ಬಿಟ್ಟರೆ, ಪುನಃ ದೊರೆಯಲಾರದು. ಮಿತ್ರರೇ ಹೇಳಿರಿ, ಇದರಲ್ಲಿ ನಿಮ್ಮೆಲ್ಲರ ಅಭಿಪ್ರಾ ಯವು ಹೇಗಿದೆ?

**ಲತೀಫ್:**—ರಾಯರೇ, ನಿಮ್ಮ ಆಲೋಚನೆಯು ಮಹತ್ವದಾಗಿರುತ್ತದೆ. ಜನರನ್ನು ವಂಚಿಸಿ, ಹಣಗಳಿಸಲು ಇದು ಒಳ್ಳೆಯ ಸಂದರ್ಭ. ನಮ್ಮವರಿಗೆ ಈಗ ಸ್ವದೇಶಿಯ ಹುಚ್ಚು ತಲೆಗೇರಿರುವುದು. ಇಂಥಾ ಸಮಯದಲ್ಲಿ ನಮ್ಮ ಲಾಭದ ದಾರಿ ನೋಡಿಕೊಳ್ಳಬೇಕು.

**ಜಗಜೀವನ:**—ಇನ್ನೊಂದು ಮಹತ್ವದ ಸೂಚನೆಯಿದೆ. ನಮ್ಮ ಲಾಭವು ವೃದ್ಧಿಯಾದ ಈ ಸಮಯದಲ್ಲಿ, ನಾವು ಗವರ್ನರ ಸಾಹೇಬರಿಗೂ, ಎಕ್ಸಿಕ್ಯೂಟಿವ್ ಕೌನ್ಸಿಲರುಗಳಿಗೂ, ಬಹಳ ವಿಜೃಂಭಣೆಯಿಂದ ಒಂದು 'ಪಾರ್ಟಿ' ಕೊಡಬೇಕು.

**ಲತೀಫ್:**—ದೊಡ್ಡ ದೊಡ್ಡ ಹುದ್ದೇದಾರರೆಲ್ಲರಿಗೂ ಆಮಂತ್ರಣ ಕೊಡಬೇಕು.

**ಜಗಜೀವನ:**—ಅವಶ್ಯವಾಗಿ. ಸರಕಾರದವರ ಪೈಕಿ ಯಾರಾದರೂ ನಮ್ಮ ಪಾರ್ಟಿಯನ್ನು ಎಂದಿಗೂ ಮರೆಯಬಾರದು.

**ವಿದ್ಯಾಧರ:**—(ಇಷ್ಟರ ವರೆಗೆ ಅವರ ಮಾತುಗಳನ್ನು ಸುಮ್ಮನೆ ಕಿವಿಕೊಟ್ಟು ಕೇಳುತ್ತಿದ್ದವನು ನಡುವೆ ಬಾಯಿಹಾಕಿ) ಗವರ್ನರರಿಗೆ ಯಾಕೆ ಸ್ವಾಮಿ ಪಾರ್ಟಿ? ನಮಗೆ ಸುದಿನಗಳು ಬಂದುದು ಜನರಿಂದ. ಸ್ವದೇಶಿ ಚಳವಳವಲ್ಲದಿದ್ದರೆ, ನಾವು ಗಿರಣಿ ಮುಚ್ಚಬೇಕಾಗುತಿತ್ತು.

**ಜಗಜೀವನ:**—"ಊರಿಗೊಂದಾದರೆ ಪೋರನಿಗೊಂದು." ಎಲ್ಲದರಲ್ಲಿಯೂ ವಿದ್ಯಾಧರರ ಮತವೊಂದು ಬೇರೆಯೆ. ನಿಮಗೆ ಏನೂ ತಿಳಿಯುವುದಿಲ್ಲ, ವಿದ್ಯಾಧರರಾಯರೇ.

**ವಿದ್ಯಾಧರ:**—ಏನು ತಿಳಿಯಬೇಕು ಸ್ವಾಮಿ? ಸರಕಾರವು ಕರಏರಿಸಿದೆ. "ಎಕ್ಸ್‌ಚೇಂಜ್" (Exchange) ದರ ಏರಿಸಿ, ಲಂಕೇಶಯರಿನ ಬಟ್ಟೆಗೆ ಪ್ರೋತ್ಸಾಹ ಕೊಡುತ್ತಾ ಇದೆ. ನಮ್ಮ ಸಹಾಯಕ್ಕೆ ಬಂದುದು ಜನರು. ಹೀಗಿರುವಾಗ, ನಮಗೆ ಲಾಭಸಿಕ್ಕಿದರೆ, ಕೃತಜ್ಞತೆ ತೋರಿಸುವುದು ಸರಕಾರಕ್ಕೇನು? ಯಾವ ನ್ಯಾಯ ಸ್ವಾಮಿ ಇದು?

**ಜಗಜೀವನ**:— ಮೂರ್ಖರೇ, ಸರಕಾರದ ಸಹಾಯವಿಲ್ಲದಿದ್ದರೆ, ನಾವು ಗಿರಣಿಗಳನ್ನು ಕೂಲಿಕಾರರಿಗೆ ಒಪ್ಪಿಸಿಕೊಡಬೇಕಾದೀತು. ಕೂಲಿ ಏರಿಸಬೇಕೆಂದು ಅವರು ಮುಷ್ಕರ ಹಿಡಿದರೆ, ಕೂಲಿಕಾರರ ರಕ್ತಹೀರುವ ಚೇಳುಗಳೆಂದು, ಜನರೆಲ್ಲರೂ ನಮ್ಮನ್ನು ದೂರುವರು. ಮಾತ್ರವಲ್ಲದೆ, ಅವರಿಗೇ ಸಹಾಯಮಾಡುವರಲ್ಲದೆ ನಮಗೆ ಸಹಾಯಮಾಡುವವರಲ್ಲ. ಕೂಲಿಯವರ ಸೊಕ್ಕು ಇಳಿಸಲಿಕ್ಕೆ ನಮಗೆ ಸರಕಾರದ ಬೆಂಬಲವಲ್ಲದೆ ಬೇರೆ ಉಪಾಯವಿಲ್ಲ, ತಿಳಿಯಿತೇ. (ಇತರ ಮೆಂಬರರನ್ನುದ್ದೇಶಿಸಿ) ಪಾರ್ಟಿಗೆ ಎಲ್ಲರ ಸಮ್ಮತಿಯೇ?

**ಎಲ್ಲರೂ**:— ಸಮ್ಮತಿ, ಸಮ್ಮತಿ.

**ಜಗಜೀವನ**:— ಹಾಗಾದರೆ, ಎಲ್ಲರೂ ಮುಕ್ತ ಹಸ್ತದಿಂದ ವರ್ಗಣಿ ಕೊಡಬೇಕು. ಸೆಕ್ರೆಟರಿಗಳೇ, ಪಾರ್ಟಿಯ ಅಂದಾಜು ಖರ್ಚು ಎಷ್ಟಾಗುವುದು?

**ಸೆಕ್ರೆಟರಿ**:—(ಗಡಿಬಿಡಿಯಿಂದ ಪೇನು ಕಿವಿಯ ಮೇಲಿಟ್ಟು ಓಡಿಬಂದು ತಾನು ಮಾಡಿದ ಅಂದಾಜ ಖರ್ಚಿನ ಪಟ್ಟಿಯನ್ನು ಕೈಯಲ್ಲಿ ಹಿಡಿದು) ಆಮಂತ್ರಣ ಪತ್ರಿಕೆಗಳಿಗೆ 300 ರೂ; ಗವರ್ನರ್ಸ್ ಬೇಂಡಿಗೆ ರೂ. 500; ಶೆಂಪೆನ್, ಬ್ರೇಂಡಿ, ವಿಸ್ಕಿಗೆ ರೂ. 1200; ಊಟಕ್ಕೆ ರೂ. 1500; ಹಾಲ್ ಶೃಂಗಾರಕ್ಕೆ ರೂ. 500; ಚಿಲ್ಲರೆ ಖರ್ಚು ರೂ. 1000; ಜುಮ್ಲಾ 5000 ರೂಪಾಯಿಗಳು.

**ಜಗಜೀವನ**:— ಸರಿ; ಇಗೊಳ್ಳಿ, ನಾನು ಸಾವಿರ ರೂಪಾಯಿ ಕೊಡುತ್ತೇನೆ. ಎಲ್ಲರೂ ಉದಾರ ಮನಸ್ಸಿನಿಂದ ಸಹಾಯ ಮಾಡಿರಿ. ಹಣ ಜಾಸ್ತಿ ಉಳಿದರೆ, ಗಿರಣೀ ಮಾಲಕರ ಹೆಸರಲ್ಲಿ, ಗವರ್ನರ ಸಾಹೇಬರಿಗೆ ಉತ್ತಮ ಪಾರಿತೋಷಕವೊಂದನ್ನು ಕೊಡೋಣ. (ಚೆಕ್ ಬರೆದುಕೊಡುವನು)

**ಎಲ್ಲರೂ**:— ಹಾಗೆಯೆ ಆಗಲಿ. (ಸೆಕ್ರೆಟರಿಯು ವಂತಿಗೆ ಪಟ್ಟಿಯನ್ನು ಎಲ್ಲಾ ಸದಸ್ಯರ ಬಳಿಗೆ ಕೊಂಡುಹೋಗುವನು. ಅವರು ಯಥಾನುಶಕ್ತಿ ಬರೆಯುವರು. ಅಷ್ಟರಲ್ಲಿ ಸಿಪಾಯಿಯು ತೆರೆಗೆ ಹೋಗಿ, ಅಲ್ಲಿಂದಲೇ ಯಾರೊ ಡನೆಯೋ ಮಾತಾಡುತ್ತಿರುವಂತೆ)

**ಸಿಪಾಯಿ:**—(ತೆರೆಯಿಂದ) ಎಲೊ, ಯಾರೊ ನೀನು? ನಡೆ. ಧನಿಗಳಿರುವ ಸಮಯದಲ್ಲಿ ಏಕೆ ಬಂದಿರುವೆ. ಇದು ಬೇಡುವ ಸ್ಥಳವಲ್ಲ, ನಡೆ, ನಡೆ. (ಸಿಪಾಯಿಯೂ ಕೂಲಿ ರಂಗನೂ ಪ್ರವೇಶಿಸುವರು. ರಂಗನು ಸಿಪಾಯಿಗೆ ನಮಸ್ಕಾರ ಮಾಡುತ್ತಾ)

**ರಂಗ:**—ಸ್ವಲ್ಪ ಸಮಾಧಾನ ಮಾಡಿಕೊಳ್ಳಿ ಸಿಪಾಯಿ ಮಹಾರಾಜರೇ. ಯಜಮಾನರಿಗಿಂತಲೂ, ನಿಮಗೆ ಹೆಚ್ಚು ಹೆದರುವ ಸಮಯ ಬಂತಲ್ಲಾ. ಸ್ವಾಮಿ, ನಾನು ಸ್ವಲ್ಪ ನನ್ನ ಧನಿಯವರೊಡನೆ ಮಾತನಾಡಬೇಕೆಂದು ಬಂದಿರುವೆನು.

**ಸಿಪಾಯಿ:**—ಏ ಕತ್ತೆಮಗನೆ ನಡೆ. ಧನಿಯವರೊಡನೆ ಮಾತಾಡಲು ನೀನು ಯಾರು?

**ರಂಗ:**—ನಾನೊಬ್ಬ ಬಡಕೂಲಿ ಸ್ವಾಮಿ. ರಾಯರ ಗಿರಣಿಯಲ್ಲಿ ದುಡಿಯುವ ಒಬ್ಬ ಬಡಕೂಲಿ.

**ಜಗಜೀವನ:**—(ಗಲಾಟೆ ಏನೆಂದು ತಿರುಗಿ ನೋಡಿ) ಸಿಪಾಯಿ, ಏನದು ಗಲಾಟೆ?

**ಸಿಪಾಯಿ:**—(ಬಗ್ಗಿ ನಮಸ್ಕರಿಸಿ) ಮಹರಾಜ್, ಈ ಹಜಾಮ, ಕ್ಲಬ್ಬಿಗೆ ಪ್ರವೇಶಿಸಿ, ತಮ್ಮನ್ನು ನೋಡಬೇಕೆಂದು ಗಲಾಟೆ ಮಾಡುತ್ತಿದ್ದಾನೆ.

**ಜಗಜೀವನ:**—(ರಂಗನನ್ನುದ್ದೇಶಿಸಿ) ಎಲೊ, ನೀನು ಯಾರು?

**ರಂಗ:**—(ಅಡ್ಡಬಿದ್ದು) ದೇವರೇ, ನಾನೊಬ್ಬ ನಿಮ್ಮ ಗಿರಣಿಯಲ್ಲಿ ದುಡಿಯುವ ಬಡಕೂಲಿ. ನನ್ನ ಹೆಂಡತಿ ಪ್ರಸವ ವೇದನೆಯನ್ನು ತಡೆಯಲಾರದೆ ತೀರಿಕೊಂಡಳು. ಅವಳ ದಹನ ಕ್ರಿಯೆಯನ್ನು ನೆರವೇರಿಸಲು ನನ್ನಲ್ಲಿ ಹಣವಿಲ್ಲ. ಅದಕ್ಕಾಗಿ ಮಹಾಪ್ರಭುಗಳ ಸಹಾಯಬೇಡಲು ಬಂದಿರುವೆನು. (ಪುನಃ ಅಡ್ಡ ಬೀಳುವನು)

**ಜಗಜೀವನ:**—(ತಿರಸ್ಕಾರದಿಂದ) ಹೋಗು, ಹೋಗು. ಈಗ ನಿನಗೆ ಸಹಾಯಮಾಡಲು ಸಮಯವಿಲ್ಲ. ನಾಳೆ ಆಫೀಸಿಗೆ ಬಂದು ಬೇಡು.

**ರಂಗ:**—(ದುಃಖದಿಂದ ಪುನಃ ಅಡ್ಡ ಬಿದ್ದು) ಪ್ರಭೂ, ನಾಳೆಯ ವರೆಗೆ ಹೆಣವನ್ನು ಮನೆಯಲ್ಲಿರಿಸಿ, ಕೊಳೆಯುವಂತೆ ಮಾಡಲಾಗುತ್ತದೆಯೆ? ಸ್ವಾಮಿ, ಇಂದೇ ನನ್ನ ಮೇಲೆ ದಯೆದೋರಿರಿ. ನನ್ನ ಸಂಬಳದಿಂದಾದರೂ ಅಷ್ಟು ರೂಪಾಯಿಗಳನ್ನು ಕೊಡಿರಿ. ದಮ್ಮಯ್ಯಾ ಸ್ವಾಮಿ, ಬಡವನ ಗೋಳನ್ನು ಕೇಳಿರಿ. (ಅವನು ಈ ರೀತಿ ದುಃಖಿಸುವಾಗ ಕ್ಲಬ್ಬಿನ ಇತರ ಮೆಂಬರರು ಅವನನ್ನು ಹಾಸ್ಯ ಮಾಡುತ್ತಾ ನಗುವರು)

**ಜಗಜೀವನ:**—ಏ, ಹೋಗು. ಪಶುಗಳಂತಿರುವ ನಿಮ್ಮ ಹೆಣವನ್ನೂ ಸುಡಬೇಕೆ? ಒಂದು ಹೊಂಡ ಮಾಡಿ ಹುಗಿದು ಬಿಡು. ನಡೆ, ಇಲ್ಲಿ ಸುಮ್ಮನೆ ರಗಳೆ ಮಾಡಬೇಡ. (ಇತರ ಮೆಂಬರರೊಡನೆ ತಾನೂ ನಗುವನು)

**ರಂಗ:**—ಅಯ್ಯೋ ಸ್ವಾಮಿ, ನಾವು ಹಿಂದುಗಳಲ್ಲವೇ? ಹೆಣವನ್ನು ಹುಗಿಯೋದು ಹಿಂದೂ ಧರ್ಮವಿರುದ್ಧವಲ್ಲವೇ ಸ್ವಾಮಿ.

**ಜಗಜೀವನ:**—ಹ್ಹ! ಹ್ಹ! ಹ್ಹಾ! ನಿಮಗೆ, ಕೂಲಿಯವರಿಗೆ ಧರ್ಮನೀತಿ. ಎಲೋ ಸಿಪಾಯಿ, ಈ ಮೂರ್ಖನನ್ನು ಹೊರದಬ್ಬು. ನಮ್ಮ ಅಮೂಲ್ಯ ಸಮಯವನ್ನು ಹಾಳು ಮಾಡಿ ಬಿಟ್ಟ. (ಸಿಪಾಯಿಯು ಕೂಲಿಯ ಕತ್ತು ಹಿಡಿದು ದೂಡುವನು)

**ರಂಗ:**—ಹಾ! ಬಡವರಬಂಧೂ, ಪರಮಾತ್ಮಾ, ನೀನಲ್ಲದೆ ಮತ್ತಾರು ಗತಿ ನಮಗೆ. (ಹೋಗುವನು)

**ಜಗಜೀವನ:**—ಧರ್ಮನೀತಿ. ಈ ಪಶುಗಳಿಗೂ ಧರ್ಮ ನೀತಿಯಂತೆ. ಹ್ಹ! ಹ್ಹ! ಹ್ಹಾ! ಮೃಗಗಳಂತೆ ದುಡಿದು, ಮೂರು ಹೊತ್ತು ಉಂಡು ಸಾಯುವವರಿಗೆ ಧರ್ಮವಂತೆ! ಈ ವಿಷಯವು ಬಹಳೇ ವಿನೋದವಾಗಿ ತೋರುತ್ತಿರುವುದು. ಹ್ಹ! ಹ್ಹ! ಹ! ಆಗಲಿ ಮಿತ್ರರೇ, ಆ ಬಡ ಜಂತುವಿನ ಸ್ಮರಣೆ ಮಾಡಿ, ನಾವೇಕೆ ನಮ್ಮ ಸಂತೋಷವನ್ನು ಕುಗ್ಗಿಸಬೇಕು? ನಡೆಯಿರಿ, ಹೋಗೋಣ.

(ಎಲ್ಲರೂ ಮುಂದೆ ಬರುವರು. ತೆರೆ ಬೀಳುವುದು)

---

## ೯. ಮಾರ್ಗ.

(ಜಗಜೀವನರಾಯರೂ ಆ ಕ್ಲಬ್ಬಿನ ಇತರ ಗಿರಣೀ ಮಾಲಕರೂ ಪ್ರವೇಶಿಸುವರು)

**ಜಗಜೀವನ:**—(ನೆನಪಾದವನಂತೆ ನಟಿಸಿ) ಹಾ! ನೆ ನ ಪಾ ಯಿ ತು . ಮಿತ್ರರೇ, ಇದೇ ಭಾನುವಾರ ನನ್ನ ಪತ್ನಿಯ ಜನ್ಮ ದಿನೋತ್ಸವವಾದುದರಿಂದ, ಈ ಊರಲ್ಲಿರುವ ಎಲ್ಲಾ ಗಿರಣೀಮಾಲಕರಿಗೂ, ಒಂದು ಔತಣವನ್ನು ಕೊಡಬೇಕೆಂದಿರುವೆನು. ಅಮೇರಿಕದ ಪ್ರಸಿದ್ಧ ನರ್ತಕಿಯಾದ ಮಿಸ್ ಸಮ್ಮರ್ ಸಾಲ್ಟಳನ್ನು ಅದಕ್ಕಾಗಿ ಆಮಂತ್ರಿಸಿರುವೆನು. ಇದೂ ಅಲ್ಲದೆ, ಈ ಸಮಾರಂಭದಲ್ಲಿ ಯುರೋಪಿಯ ಯುವತಿಯರೇ ಅತಿಥಿ ಸತ್ಕಾರ ಮಾಡುವವರಿದ್ದಾರೆ. ಆದುದರಿಂದ ನನ್ನ ಆಮಂತ್ರಣವನ್ನು ಮನ್ನಿಸಿ, ತಾವೆಲ್ಲರೂ ಬಂದು ಸಮಾರಂಭವನ್ನು ಚಂದಗಾಣಿಸಿಕೊಡಬೇಕೆಂದು ಬಯಸುತ್ತೇನೆ.

**ಎಲ್ಲರೂ:**—ಓಹೋ, ಅಗತ್ಯವಾಗಿಯೂ ಬರುತ್ತೇವೆ.

**ಜಗಜೀವನ:**—ಹಾಗಾದರೆ ನಾನು ಹೋಗಿ ಬರುತ್ತೇನೆ. ಭಾನುವಾರವು ನೆನಪಿರಲಿ. (ಎಲ್ಲರಿಗೂ ನಮಸ್ಕರಿಸಿ ಹೋಗುವನು)

**ಲತೀಫ್:**—ಏನು ಖರ್ಚು ಈ ರಾಯರದು. ಬರಿಯ ಅಮೇರಿಕದ ನರ್ತಕಿಯು ಬರುವ ಹೋಗುವ ಖರ್ಚು ಸಾಧಾರಣ ಎರಡು ಮೂರು ಸಾವಿರ ಮಿಕ್ಕಬಹುದು. ನಿಜವಾಗಿಯೂ ಜಗಜೀವನರು ಕುಬೇರನ ವಂಶದವರು.

**ವಿದ್ಯಾಧರ:**—ರಮಾನಂದರೇ, ಮದುವೆಯಾಗುವ ಮೊದಲು, ಹಣ ವೆಚ್ಚ ಮಾಡುವುದೆಂದರೆ ಗೊತ್ತೇ ಇರಲಿಲ್ಲ ಜಗಜೀವನರಿಗೆ. ಯಾವಾಗಲೂ ಹಿಂದೂಸ್ಥಾನದ ಆರ್ಥಿಕ ಸಂಪತ್ತನ್ನು ಹೆಚ್ಚಿಸುವುದು ಹೇಗೆಂದು ದಿನ ಇಡೀ ಪುಸ್ತಕ ಓದುವುದೊಂದೇ ಕೆಲಸವಾಗಿತ್ತು. ಈಗ ಧ್ಯೇಯ ಗೀಯ ಎಲ್ಲಾ ಹಾರಿಹೋಯಿತು. ಸುಖಲಾಲಸೆಯೊಂದೆ.

**ರಮಾನಂದ:**—ಮದುವೆಯಾದುದೇ ತಡ. ಮೊದಲಿನ ಜಗಜೀವನರೇ ಅಲ್ಲ. ಮುಕ್ತಾಬಾಯಿಯವರ ಪ್ರಭಾವದಿಂದ, ದೇಶಭಕ್ತ ಜಗಜೀವನರು ಈಗ ವಿಲಾಸಭಕ್ತ ಜಗಜೀವನರಾಗಿದ್ದಾರೆ.

**ಲತೀಫ್:**—ನಮಗೇನು ರಾಯರೇ? ನಮಗೆ ಪಾರ್ಟಿ, ಔತಣ ತಿಂಗಳಿಗೆ ಒಂದರಂತಾದರೂ ಸಿಗುತ್ತದಲ್ಲವೇ? ಮತ್ತೇನು, ಅವರು ದೇಶ ಭಕ್ತರಾದರೇನು? ವಿಲಾಸ ಭಕ್ತರಾದರೇನು? ನಡೆಯಿರಿ, ಹೋಗೋಣ. (ಹೋಗುವರು)

---

## ೧೦. ಗಿರಣಿ ಮೆನೆಜರನ ಆಫೀಸು ಕೊಠಡಿ.

(ಜಗಜೀವನರಾಯರ ಗಿರಣಿಯ ಮೆನೆಜರನಾದ ಮಹೇಂದ್ರನು ಮೇಜಿನ ಮೇಲೆ ಕಾಲುಹಾಕಿ, ಸಿಗರೇಟು ಸೇದುತ್ತಾ ನಿಧಾನವಾಗಿ ಹೊಗೆಯನ್ನು ಬಿಡುತ್ತಿರುವನು. ಪಕ್ಕದಲ್ಲಿ ಒಬ್ಬ ಕ್ಲಾರ್ಕನು ಟೈಪ್ ಮಾಡುತ್ತಿರುವನು. ಕೊಠಡಿಯ ಮೂರು ಪಾರ್ಶ್ವಗಳಲ್ಲೂ ಕವಾಟು ಇಡಲ್ಪಟ್ಟಿದ್ದು, ದಪ್ಪ ಪುಸ್ತಕಗಳಿಂದ ತುಂಬಿರುವುವು. ಮೆನೆಜರನ ಕುರ್ಚಿಯ ಹಿಂಬದಿಯಲ್ಲಿ ಒಂದು ಕಬ್ಬಿಣದ ಟ್ರೆಜರಿ. ಬದಿಯಲ್ಲಿದ್ದ ಸ್ಟೇಂಡಿನ ಮೇಲೆ ವಿದ್ಯುಚ್ಛಕ್ತಿಯ ಪಂಕವು ತಿರುಗುತ್ತಿರುವುದು. ಮಹೇಂದ್ರನು ಸ್ವಲ್ಪ ಹೊತ್ತಿನ ಸಂತರ ಎದ್ದು ಅತ್ತಿತ್ತ ತಿರುಗುವನು)

**ಮಹೇಂದ್ರ:**—(ತನ್ನಲ್ಲೇ ಆಲೋಚಿಸುತ್ತಾ) ಈಗ ಏನುಮಾಡಲಿ. ರಾಯರಿಗೆ ಲೆಕ್ಕತೋರಿಸದೆ ಬಹಳ ದಿವಸಗಳಾದುವು. ಅವರಾದರೂ ನಾನು ಕೇಳಿದಷ್ಟು ಹಣ ಕೊಡುತ್ತಿರುವರು. ಆ ಸಲ, ಕೂಲಿಗಾಗಿ ವಿಂಗಡಿಸಿದ ಹತ್ತುಸಾವಿರದಲ್ಲಿ, ಐದುಸಾವಿರ ನಾನೇ ಖರ್ಚುಮಾಡಿರುವೆನು. (ಪುನಃ ಆಲೋಚಿಸಿ) ಏನೇ ಆಗಲಿ. ಪುಸ್ತಕದಲ್ಲಿ, ಕೂಲಿಯವರಿಗೆ ಸಂದ ಹಣ ಎಂದು ಬರೆದುಬಿಟ್ಟರಾಯಿತು. ನಿರಕ್ಷರಕುಕ್ಷಿಗಳಾದ ಕೂಲಿಯವರಿಂದ ಹೆಬ್ಬೆಟ್ಟು ಮುದ್ರೆ ತೆಗೆದುಕೊಂಡು, ಬೇಕಾದಂತೆ ಸಂಬಳ ಪಾವತಿಯ ರಶೀದಿ ಬರೆದರಾಯಿತು. ನನಗೆ ರಾಯರಿಂದ ತಿಂಗಳಿಗೆ ಸಿಗುವ 500 ರೂಪಾಯಿಗಳು ಸಾಲದಾಗಿದೆ. ಹೀಗೆ ಮಾಡದಿದ್ದರೆ ಬೇರೆ ದಾರಿಯಿಲ್ಲ.

(ಅಷ್ಟರಲ್ಲಿ ಮುಸಲ್ಮಾನ ಸಿಪಾಯಿಯು ಪ್ರವೇಶಿಸಿ ಸಲಾಂ ಮಾಡಿ)

**ಸಿಪಾಯಿ:**—ಹುಜೂರ್, ಒಬ್ಬ ಕೂಲಿ ಹೆಂಗಸು, ನಿಮ್ಮಿಂದ ಹಣ ಬೇಡಲಿಕ್ಕಾಗಿ ಬಂದು, ಹೊರಗೆ ನಿಂತಿರುವಳು.

**ಮಹೇಂದ್ರ:**—(ಆತುರತೆಯಿಂದ) ಏನು? ಹೆಂಗಸು! ಮುದುಕಿಯೇನು?

**ಸಿಪಾಯಿ**:—ಅಲ್ಲ ಹುಜೂರು. ಸಾಧಾರಣ ೧೬-೧೮ ವರ್ಷಗಳಾಗಬಹುದು.

**ಮಹೇಂದ್ರ**:—(ನಕ್ಕು ಅಂಗೈ ತಿಕ್ಕುತ್ತಾ) ಆಹಾ! ಹಾಗಾದರೆ ಒಳಗೆ ಕಳುಹಿಸು, ಮತ್ತು ಇನ್ನು ಯಾರಾದರೂ ನನ್ನನ್ನು ಕೇಳಿದರೆ, ನಾನು ಇಲ್ಲವೆಂದು ಹೇಳಿಬಿಡು.

**ಸಿಪಾಯಿ**:— ಹುಕುಂ ಹುಜೂರು. (ಸಲಾಂ ಮಾಡಿ ಹೋಗುವನು.)

**ಮಹೇಂದ್ರ**:—(ತುಸು ಚಿಂತಿಸಿ) ಹಲ್ಲೋ ಕ್ಲಾರ್ಕ್. (ಬೆರಳಿನಲ್ಲಿ ಸನ್ನೆಮಾಡಿ ಕರೆಯುವನು. ಕ್ಲಾರ್ಕನು ಅವಸರದಿಂದ ಎದ್ದು ಬಂದು ಸಲಾಂ ಮಾಡಿ)

**ಕ್ಲಾರ್ಕ್**:—Yes Sir.

**ಮಹೇಂದ್ರ**:— ನೀನು ಮನೆಗೆ ಹೋಗಬಹುದು. (ತುಸುನಗುವನು. ಕ್ಲಾರ್ಕನು ಗೊತ್ತಾಗದವನಂತೆ ನಟಿಸುವನು. ಮಹೇಂದ್ರನು ಕಣ್ಣೊತ್ತಲು, ಕ್ಲಾರ್ಕನು ಗೊತ್ತಾದವನಂತೆ ಸ್ವಲ್ಪ ನಕ್ಕು, ತನ್ನ ಕೋಟು ತೆಗೆದುಕೊಂಡು ಮೆನೆಜರನಿಗೆ ದೊಡ್ಡ ಸಲಾಂ ಮಾಡಿ ಹೋಗುವನು. ಮಹೇಂದ್ರನು ಗೋಡೆಯ ಮೂಲೆಯಲ್ಲಿದ್ದ ಕನ್ನಡಿಯ ಮುಂದೆ ತನ್ನ ಉಡುಪು ಕ್ರಾಪ್‌ಗಳನ್ನು ಸರಿಮಾಡಿ, ಸಿಗರೇಟು ಉರಿಸಿ, ಕುರ್ಚಿಯ ಮೇಲೆ ಕುಳಿತುಕೊಳ್ಳುವನು. ಗಿರಣಿಯಲ್ಲಿ ದುಡಿಯುವ ಕೂಲಿಬಾಲಿಕೆಯಾದ ರಾಧೆಯು, ಹೆದರುತ್ತ ಹೆದರುತ್ತ ಪ್ರವೇಶಿಸಿ ಬಾಗಿಲ ಬಳಿಯಲ್ಲಿ ನಿಲ್ಲುವಳು.)

**ಮಹೇಂದ್ರ**:—(ಆಕೆಯನ್ನೊಮ್ಮೆ ದಿಟ್ಟಿಸಿ ನೋಡಿ) ಯಾಕೆ ಹುಡುಗಿ ದೂರ ನಿಂತಿರುವಿ? ಬಾ ಕುಳಿತುಕೊ.

**ರಾಧೆ**:— ಬೇಡ ಮೆನೆಜರರೇ, ಕೂಲಿಗಳು ಯಜಮಾನರ ಮುಂದೆ ಕುಳಿತುಕೊಳ್ಳುವುದು ಸರಿಯಲ್ಲ. ನಾನು ಇಲ್ಲಿಯೇ ನಿಲ್ಲುವೆನು.

**ಮಹೇಂದ್ರ**:— ಯಾಕೆ ಬಂದೆ? ನನ್ನಿಂದ ನಿನಗೇನಾಗಬೇಕು ಹೇಳು? ನಿನ್ನಂಥಾ ಸುಂದರಿಗೆ ಸಹಾಯಮಾಡದೆ, ಮತ್ಯಾರಿಗೆ ಸಹಾಯ ಮಾಡಲಿ.

**ರಾಧೆ**:—ಧನಿಗಳೇ, ನನ್ನ ರೂಪಕ್ಕೆ ಬೆಂಕಿಹಚ್ಚಲಿ. ನನ್ನ ಮುದಿ ತಾಯಿಯು ಕಾಯಿಲೆಯಿಂದ ನರಳುತ್ತಿರುವಳು. ಅವಳಿಗೆ ಔಷಧ

ಮಾಡದಿದ್ದರೆ ಬದುಕುವಂತಿಲ್ಲ. ಧನಿಗಳೇ, ಈ ಬಡಕೂಲಿಯವಳ ಮೇಲೆ ದಯೆಯಿಟ್ಟು, ನನ್ನ ಸಂಬಳದಿಂದಾದರೂ ನಾಲ್ಕು ರೂಪಾಯಿಗಳನ್ನು ಕೊಡಬೇಕೆಂದು ಬೇಡಿಕೊಳ್ಳುತ್ತೇನೆ.

**ಮಹೇಂದ್ರ**:—ಓಹೋ ಇಷ್ಟೇತಾನೆ. ಅದಕ್ಕೆ ಇಷ್ಟು ದುಃಖಪಡಬೇಕೆ. ನೀನು ನಿನ್ನ ತಾಯಿಗಾಗಿ ಕಷ್ಟಪಡುವುದು ಸರಿಯಲ್ಲ. ಮುದುಕಿಯುರು ಸಾಯಲೇಬೇಕು. ನೀನಾದರೂ, ಇನ್ನೂ ತಾರುಣ್ಯದ ಪ್ರಥಮಾಂಕದಲ್ಲಿ ಮೆರೆಯುತ್ತಿರುವಿ. ನಿನ್ನನ್ನು ನಾನು ಸುಖಿಯಾಗಿ ಮಾಡುತ್ತೇನೆ. ನೀನು ಮಾತ್ರ ನನ್ನ ಇಚ್ಛೆಯಂತೆ ನಡೆಯಬೇಕು.

**ರಾಧ**:—(ತುಸು ಹೆದರಿ ಹಿಂದಕ್ಕೆ ಸರಿದು) ಮೆನೆಜರರೇ, ತಮ್ಮ ಬಾಯಿಂದ ಇಂಥಾ ಕೆಟ್ಟ ಮಾತು ಬರಬಾರದು. ನಾವೆಂದರೆ, ನಿಮ್ಮ ಕೈಕೆಳಗೆ ದುಡಿದು ಜೀವನ ಸಾಗಿಸುವ ಶ್ರಮಜೀವಿಗಳು. ನಮ್ಮ ಮೇಲೆ ನೀವು ಕರುಣೆ ಇಡಬೇಕಲ್ಲದೆ, ಪಾಪದೃಷ್ಟಿ ಬೀರುವುದು ಸರಿಯಲ್ಲ.

**ಮಹೇಂದ್ರ**:—ಹ್ಹ! ಹ್ಹ! ಹ್ಹಾ! ಪಾಪ-ಪುಣ್ಯ. ಇದರ ವಿಷಯ ನೀನೇನು ಬಲ್ಲೆ. ನಮ್ಮಂಥವರ ಕಟಾಕ್ಷ, ನಿಮ್ಮಂಥ ಕೂಲಿಯವರ ಮೇಲೆ ಬೀಳುವುದೆಂದರೆ, ನಿಮ್ಮ ಸೌಭಾಗ್ಯವೆನ್ನಬೇಕು. ತಿಳಿಯಿತೇನು ಹುಡುಗಿ.

**ರಾಧ**:—ಆದರೆ ಮೆನೆಜರರೆ, ನಿಮ್ಮಂಥವರಿಗಿರುವ ಸ್ವಾಭಿಮಾನ, ಧರ್ಮನೀತಿಗಳು ನಮಗೂ ಇರುವುವಲ್ಲವೇ?

**ಮಹೇಂದ್ರ**:—ಏ ಹುಡುಗಿ, ಹೆಚ್ಚಿಗೆ ಮಾತಾಡಬೇಡ. ನಿನ್ನಂಥಾ ಕ್ಷುಲ್ಲಕ ಜೀವಿಯನ್ನು ಯಾರು ಗಣ್ಯಮಾಡುವರು? ನಮ್ಮ ಇಚ್ಛೆಗೆ ಯಾರೂ ವಿರೋಧಮಾಡಕೂಡದು. ನಮ್ಮ ಇಚ್ಛೆಯೇ ಕಾನೂನು. ನಿನ್ನನ್ನು ಬಲತ್ಕಾರ ಮಾಡುವಾಗ, ನಿನ್ನ ಅಪ್ಪಂದಿರು ಯಾರು ಬರುತ್ತಾರೋ ನೋಡುವೆನು.

**(ಕೈ ಹಿಡಿಯಲು ಹೋಗುವನು. ರಾಧೆಯು ಅವನಿಗೆ ಸಿಕ್ಕದ ಹಾಗೆ ಮೇಜಿನ ಸುತ್ತು ಬರುವಳು.)**

**ರಾಧ:**—ಬೇಡ, ಬೇಡ ಧನಿಗಳೇ, ನನ್ನಂಥಾ ಬಡ ಅಬಲೆಯ ಮೇಲೆ, ನಿಮ್ಮ ಪೈಶಾಚಿಕ ಅತ್ಯಾಚಾರವನ್ನು ಮಾಡಬೇಡಿರಿ. ಈ ಪಶು ಕೆಲಸಕ್ಕೆ ದೇವರು ಎಂದೂ ಮೆಚ್ಚನು.

**ಮಹೇಂದ್ರ:**—(ಬಹಳ ಪ್ರಯತ್ನಪಟ್ಟು ಬಾಲಿಕೆಯ ಕೈ ಹಿಡಿದು) ದೇವರು! ಎಲ್ಲಿಯ ದೇವರು; ನಾವೇ ದೇವರು. ನಾವು ಮುನಿದರೆ ನಿಮ್ಮೆಲ್ಲರನ್ನು ಬೂದಿ ಮಾಡಬಲ್ಲೆವು. ನೋಡುವೆನು, ನಿನ್ನ ದೇವರು ನಿನಗೆ ಸಹಾಯ ಮಾಡುವನೊ ಎಂದು. (ಬಾಲಿಕೆಯನ್ನು ತಬ್ಬಿಕೊಳ್ಳುವನು. ಅವಳು ಆತನ ಬಾಹುಗಳಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾ)

**ರಾಧ:**—ಹಾಯ್, ಅನಾಥ ರಕ್ಷಕಾ, ಪರಮಾತ್ಮಾ, ನನ್ನನ್ನು ಈ ಪಶು ಮನೋವೃತ್ತಿಯುಳ್ಳ ರಾಕ್ಷಸನಿಂದ ರಕ್ಷಿಸು. (ಮೂರ್ಛೆ ತಪ್ಪುವಳು.)

(ತೆರೆಯಲ್ಲಿ ಗಲಾಟೆ. ಮುಸಲ್ಮಾನ ಸಿಪಾಯಿಯ 'ಯಾ ಅಲ್ಲಾ' ಎಂಬ ಕೂಗು ಕೇಳಿಸುವುದು. ಲಕ್ಷ್ಮಣನು ಅವಸರದಿಂದ ಪ್ರವೇಶಿಸಿ ಒಳಗಿನ ಸ್ಥಿತಿಯನ್ನು ನೋಡಿ, ದಂಗು ಬಡೆದು ನಿಲ್ಲುವನು. ಮಹೇಂದ್ರನು ಒಮ್ಮೆಗೆ ಸಿಡಿಲು ಬಡಿದವನಂತಾಗಿ, ನಾಚಿಕೆಯಿಂದಲೂ ಕೋಪದಿಂದಲೂ ರಾಧೆಯನ್ನು ಕೆಳಗೆ ಹಾಕಿ, ಲಕ್ಷ್ಮಣನನ್ನು ದುರದುರನೇ ನೋಡುತ್ತಾ)

**ಮಹೇಂದ್ರ:**—ಕೂಲಿ, ಅಪ್ಪಣೆ ವಿನಹ ಮೆನೆಜರನ ಕೊಠಡಿಗೆ ಏಕೆ ಬಂದೆ?

(ಲಕ್ಷ್ಮಣನು ಕ್ರೋಧಾವೇಶದಿಂದ ಮಾತು ಬಾರದೆ ಸುಮ್ಮನಿರುವನು)

**ಮಹೇಂದ್ರ:**—(ಸಮೀಪಕ್ಕೆ ಹೋಗಿ) ಏಕೆ ಬಂದೆ, ಬೊಗಳು.

**ಲಕ್ಷ್ಮಣ:**—(ತೀಕ್ಷ್ಣವಾದ ಸ್ವರದಿಂದ) ನಾನು ಮೆನೆಜರನ ಕೊಠಡಿಗೆ ಬರಲಿಲ್ಲ. ಅಬಲೆಯಾದ ಒಬ್ಬ ಕೂಲಿ ಬಾಲಿಕೆಯ ಮೇಲೆ ಅತ್ಯಾಚಾರ ಮಾಡುವ ಪಿಶಾಚಿಯ ವಾಸಸ್ಥಾನಕ್ಕೆ ಬಂದೆ.

**ಮಹೇಂದ್ರ:**—(ಲಕ್ಷ್ಮಣನ ಕೆನ್ನೆಗೆ ಹೊಡೆದು) ನಾಯಿ, ಬಾಯಿ ಮುಚ್ಚು. ಹೆಚ್ಚು ಒದರಬೇಡ.

**ಲಕ್ಷ್ಮಣ:**—ಯಾರು ನಾಯಿ? ಹಿಂದುಮುಂದಿನ ವಿಚಾರವಿಲ್ಲದೆ, ಉನ್ಮತ್ತ ರಾಕ್ಷಸನಂತೆ, ಅಬಲೆಯರ ಅತ್ಯಾಚಾರ ಮಾಡುವವರು ನಾಯಿಗಿಂತಲೂ ಕಡೆ.

**ಮಹೇಂದ್ರ:**— ನಾವು ಅಧಿಕಾರವಂತರು. ನಮ್ಮಿಷ್ಟದಂತೆ ವರ್ತಿಸುವೆವು.

**ಲಕ್ಷ್ಮಣ:**— ಏನು, ಏನು ಹೇಳುವೆ? ಅಧಿಕಾರವಿರುವುದೆಂಬ ಮಾತ್ರಕ್ಕೆ, ಇಂಥಾ ಅನ್ಯಾಯವನ್ನೂ ಮಾಡುವುದೇ? ನಿನ್ನ ಪತ್ನಿಯ ಮಾನವನ್ನು ಪರರು ಅಪಹರಿಸಿದರೆ, ನೀನೇನು ಹೇಡಿಯಂತೆ ಸುಮ್ಮನಿರುವೆಯಾ?

**ಮಹೇಂದ್ರ:**— ಏನು! ಬರಿಯ ಕೂಲಿಯವನಿಂದ ಇಂಥಾ ಅವಮಾನದ ಮಾತು ಮಾತುಗಳನ್ನು ಕೇಳಬೇಕೆ? (ಕೈ ಬೀಸಿ ಮುಖಕ್ಕೆ ಹೊಡೆಯುವನು. ಲಕ್ಷ್ಮಣನು ಅದನ್ನು ಕೂಡಲೇ ತಪ್ಪಿಸಿಕೊಂಡು ಹಿಂದಿರುಗಿ ಮಹೇಂದ್ರನಿಗೊಂದು ಹೊಡೆಯುವನು. ಮಹೇಂದ್ರನು ಆಘಾತವನ್ನು ತಡೆಯಲಾರದೆ ಭೂಶಾಯಿಯಾಗುವನು.)

**ಲಕ್ಷ್ಮಣ:**— ನೀನು ನನ್ನ ಮೆನೆಜರನಾಗಿರುವೆ. ಆದುದರಿಂದ ನಿನ್ನನ್ನು ಇಷ್ಟಕ್ಕೆ ಬಿಟ್ಟಿರುವೆನು. (ರಾಧೆಯನ್ನು ನೋಡಿ) ಹಾ! ತಂಗಿ, ನೀನು ಮದುವೆಯಾಗಲಿರುವ ಸುದರ್ಶನನು, ಇದನ್ನು ಕೇಳಿದರೆ ಎಷ್ಟು ಖೇದಗೊಳ್ಳುವನು.

(ಮಹೇಂದ್ರನು ಮುಖುಡನ್ನು ಸವರುತ್ತಾ, ಮೆಲ್ಲನೆ ಎದ್ದು ಒಳಗೆ ಹೋಗಿ, ಒಂದು ಚಬುಕನ್ನು ತಂದು)

**ಮಹೇಂದ್ರ:**—(ಹಲ್ಲು ಮಸೆಯುತ್ತಾ) ರಾಸ್ಕಲ್, ಕೂಲಿ. ನಿನ್ನ ಮೆನೆಜರನ ಮೇಲೆ ಕೈ ಎತ್ತಿದೆಯಾ. (ಚಬಕಿನಿಂದ ಬಲವಾಗಿ ಒಂದು ಪೆಟ್ಟು ಹೊಡೆಯುವನು.)

**ಲಕ್ಷ್ಮಣ:**— ಹೊಡಿ. ನಿನ್ನ ಆಶೆ ತೀರುವಷ್ಟು ಹೊಡಿ. ಒಬ್ಬ ಅಬಲೆಯ ಮಾನಹಾನಿಯು, ನಾನು ತಿನ್ನುವ ಈ ಹೊಡೆತಗಳಿಂದಾಗಿ ದೂರವಾಗುವುದಾದರೆ, ನಾನಷ್ಟು ಪೆಟ್ಟುಗಳನ್ನೂ ಸಂತೋಷದಿಂದ ತಿನ್ನುವೆನು. (ತಲೆಬಾಗಿ ನಿಲ್ಲುವನು. ಮಹೇಂದ್ರನು ಲಕ್ಷ್ಮಣನ ಅಂಗಾಂಗಗಳಿಗೂ ಚಡಿ ಹೊಡೆಯಲು ಲಕ್ಷ್ಮಣನು ನೋವನ್ನು ತಡೆಯಲಾರದೆ ನೆಲಕ್ಕುರುಳುವನು.)

**ಮಹೇಂದ್ರ:**—(ಆಯಾಸದಿಂದ ಮೇಲುಸಿರುಬಿಟ್ಟು) ಸಿಪಾಯಿ, ಸಿಪಾಯಿ,— ರಾಸ್ಕಲ್ಸ್, ಯಾರೂ ಕಾಣುವುದಿಲ್ಲ. (ಒಳಗೆ ಹೋಗಿ ಕೈ

ಕಾಲು ಬಾಯಿ ಕಟ್ಟಿ ಹಾಕಿರುವ ಸಿಪಾಯಿಯನ್ನೆಳತಂದು, ಕಟ್ಟು ಬಿಡಿಸಿ) ಏ ಸಾಲಾ, ಇವರಿಬ್ಬರನ್ನೂ ಹೊರದಬ್ಬು. (ಸಿಗರೇಟು ಸೇದುತ್ತಾ ಹೋಗುವನು.)

**ಸಿಪಾಯಿ:**— ಮೆನೆಜರ್ ಸಾಬ್ ಆಜ್ ಹಾರ್‌ಗಯಾ. ಲಕ್ಷ್ಮಣಪ್ಪನವರೇ, ಹೋಗಿರಿ ಇನ್ನು. ಒಳ್ಳೇ ಬುದ್ಧಿ ಕಲ್ಸಿದ್ರಿ ಮೆನೆಜರ್ ಸಾಬರಿಗೆ. ಓ ಮೆನೆಜರ್ ಕಿತನೀ ಔರತೊಂಕಾ ಇಮಾನ್ ಮಟ್ಟಿಮೇ ಡಾಲ್ಯಾ.

(ಪರದೆ ಬೀಳುವುದು)

---

## ೧೧. ಮಾರ್ಗ.

(ಲಕ್ಷ್ಮಣನು ಚಬಕಿನ ಹೊಡೆತದಿಂದಾಗಿ ಝುರ್ಝುರಿತನಾಗಿ ಮೆಲ್ಲನೇ ಪ್ರವೇಶಿಸುವನು.)

ಕುರುಂಜಿ— ಆದಿತಾಳ.

**ಲಕ್ಷ್ಮಣ:**— ಅಧಿಕಾರವೇ— ಅಧೋಗತಿ ಕಾರಣಾ ‖
ಅಧಿಕಾರದೀ— ಮೆರೆವಾ— ಕಡು ನೀಚ ಧೂರ್ತರಾ ‖
ಅಧಿಕಾರ ದರ್ಪದಾ ।
ಅತಿ ಕ್ರೂರ ಕಾರ್ಯವೂ ‖
ಸದೆ ಬಡಿವುದೋ— ದೇಶದಾ ।
ಹಿತಭಾಗ್ಯವಾ— ‖

ಹಾಯ್, ಅಧಿಕಾರದ ದರ್ಪವೇ? ಅಧಿಕಾರವಿರುವುದೆಂಬ ಮಾತ್ರಕ್ಕೆ ಎಂಥಾ ಅನ್ಯಾಯುವನ್ನು ಮಾಡುವರು. ಅಧಿಕಾರ ಮದೋನ್ಮತ್ತರಾದ ಇಂಥವರ ಅವನತಿಯಾದರೂ ಬೇಗನೇ ಆಗದಿರದು. ನಾವು ಬೆವರಿಳಿಸಿದ ಹಣವನ್ನು ಸೆಳೆದು, ಕಡೆಗೆ, ನಮಗೇ ಇದಿರು ನಿಲ್ಲುವ ಈ ಮಹೇಂದ್ರನು, ನಿಜವಾಗಿಯೂ ರಾಕ್ಷಸನು. ದೇವರೇ, ಇವನ ಈ ರಾಕ್ಷಸೀ ಅಧಿಕಾರವು ನಾಶವಾಗಿ, ಶ್ರಮಜೀವಿಗಳಾದ ಕೂಲಿಕಾರರಿಗೆ, ನಿರ್ಭಯತೆಯನ್ನೂ ಕ್ಷೇಮವನ್ನೂ ಎಂದು ಒದಗಿಸುವೆ? (ತುಸು ಚಿಂತಿಸಿ) ಅಯ್ಯೋ, ನನ್ನ ಪತ್ನಿಯ ಔಷಧಿಯ ಸಲುವಾಗಿ, ಹಣಬೇಡಲು ಹೋದ ನಾನು, ನನ್ನ ಕರ್ತವ್ಯವನ್ನು ಮರೆತೇಬಿಟ್ಟೆನು. ಆದರೆ, ನಾನಿಂದು ಸುಮ್ಮನಿರುತ್ತಿದ್ದರೆ,

ಆ ಕೂಲಿ ಬಾಲಿಕೆಗೆ ಒದಗಿದ ವಿಪತ್ತು ಮುಂದಕ್ಕೆ ಇತರರ ಪಾಲಿಗೂ ಬೀಳುತ್ತಿತ್ತು. ಇಂದು ಅವನ್ನು ತಡೆದುದೇ ಉತ್ತಮವಾಯಿತು.

(ಅಷ್ಟರಲ್ಲಿ ಸುದರ್ಶನನು ಪ್ರವೇಶಿಸಿ ಲಕ್ಷ್ಮಣನ ಹರಿದ ಉಡುಪು, ಚರ್ಮ ಒಡೆದು ಬಂದಿರುವ ರಕ್ತ, ಇವೆಲ್ಲವನ್ನೂ ನೋಡಿ ಭಯಾಶ್ಚರ್ಯಗಳಿಂದ)

**ಸುದರ್ಶನ:**—ಲಕ್ಷ್ಮಣಾ, ಏನಿದು! ನಿನ್ನ ಉಡುಪೆಲ್ಲಾ ಹರಿದು ಹೋಗಿರುವುದು? ಏನಿದು ಗಾಯದ ಬರೆಗಳು! ಹಾಯ್, ನಿನಗೆ ಯಾರು ಹೊಡೆದರು? ಹೇಳು, ಲಕ್ಷ್ಮಣ ಹೇಳು.

**ಲಕ್ಷ್ಮಣ:**—ಏನಿಲ್ಲ; ಮೆನೆಜರನ ಕೂಡೆ ನನ್ನ ಪತ್ನಿಯ ಅಸೌಖ್ಯದ ಸಲುವಾಗಿ ಹಣ ಸಾಲ ಕೇಳಲು ಹೋದುದಕ್ಕೆ ಸನ್ಮಾನ.

**ಸುದರ್ಶನ:**—(ಆಶ್ಚರ್ಯದಿಂದ) ಯಾರು . . . . ? ಮೆನೆಜರ್ ಮಹೇಂದ್ರ ಬಾಬುಗಳೇ! ಇಷ್ಟು ಕ್ರೂರತನವೇ!!

**ಲಕ್ಷ್ಮಣ:**—ಕ್ರೂರಿಯು ಮಾತ್ರವಲ್ಲ. ಬಡಕೂಲಿ ಬಾಲಿಕೆಯರ ಮೇಲೆ ಅತ್ಯಾಚಾರವೆಸಗುವ ಮಾನವೀರಾಕ್ಷಸನು.

**ಸುದರ್ಶನ:**—ಬಡ ಕೂಲಿ ಬಾಲಿಕೆ! ಅತ್ಯಾಚಾರ! ಲಕ್ಷ್ಮಣಾ ವಿಷದವಾಗಿ ಹೇಳು. (ಲಕ್ಷ್ಮಣನ ಕೈ ಹಿಡಿಯುವನು)

**ಲಕ್ಷ್ಮಣ:**—ನಿನ್ನ ರಾಧೆಯು ಇಂದು ಆ ರಾಕ್ಷಸನ ಅತ್ಯಾಚಾರಕ್ಕೆ ಬಲಿಬಿದ್ದಳು. ಅವಳನ್ನು ರಕ್ಷಿಸ ಹೋಗಿ ನನಗೆ ಈ ಗತಿಯಾಯಿತು.

**ಸುದರ್ಶನ:**—ಏನು ರಾಧೆಯೆ? (ಕೋಪೋದ್ರೇಕದಿಂದ ತನ್ನ ಕೈಯ ಲ್ಲಿದ್ದ ಬೆತ್ತವನ್ನು ಒಮ್ಮೆಗೆ ಮುರಿದು) ಈ ಬೆತ್ತ ಮುರಿದಂತೆಯೇ ಆ ಮದಾಂಧನ ಮದವನ್ನು ಮುರಿಯುಲಿಕ್ಕೇ ಬೇಕು. ರಾಧೆಗಾದ ಅವಮಾನದ ಸೇಡನ್ನು ತೀರಿಸಲಿಕ್ಕೇ ಬೇಕು. (ಹೊರಡಲುದ್ಯುಕ್ತನಾಗುವನು. ಲಕ್ಷ್ಮಣನು ಆತನನ್ನು ತಡೆದು)

**ಲಕ್ಷ್ಮಣ**—ಶಾಂತಿ, ಶಾಂತಿ. ಸುದರ್ಶನಾ ಶಾಂತನಾಗು. ಬಲ ತ್ಕಾರದಿಂದ ನಮ್ಮ ಕೆಲಸವಾಗದು. ಅವರು ಅಧಿಕಾರಿಗಳು; ಮನಸ್ಸಿಗೆ ಬಂದುದನ್ನು ಮಾಡಲು ಅವರಿಗೆ ಅಧಿಕಾರವಿದೆ. ನಾವು ಬಡವರು;

ನಮ್ಮನ್ನು ಕೇಳುವವರಿಲ್ಲ. ಆದುದರಿಂದ ಬಂಧೂ, ಸಹನೆಯೇ ನಮ್ಮ ಪ್ರಾಣಾಧಾರವು. ಎಲ್ಲವನ್ನೂ ಸಹಿಸಿಕೊಳ್ಳೋಣ. ಅವರ ಪಾಪದ ಕೊಡ ತುಂಬಲಿ. ಕಡೆಗೆ ತಾವಾಗಿಯೇ ಅದಃಪತನರಾಗುವರು.

**ಸುದರ್ಶನ:**—(ನಿರಾಶೆಯಿಂದ) ಬಾರಿ ಬಾರಿಗೂ ನೀನು ನನ್ನನ್ನು ನಿರಾಶೆಗೊಳಿಸುವಿ. ಯಾವಾಗಲೂ ನಿನ್ನ ಅಹಿಂಸೆಯ ಬೋಧನೆಯನ್ನು ಮಾಡಿ, ನನ್ನ ಉತ್ಸಾಹವನ್ನೇ ಕುಗ್ಗಿಸುತ್ತಿರುವಿ. ನಾವು ಕೂಲಿಕಾರರು ದಂಗೆ ಎದ್ದ ಹೊರತು, ಈ ನೀಚರು ಬಗ್ಗುವಂತಿಲ್ಲ.

**ಲಕ್ಷ್ಮಣ:**—ಸುದರ್ಶನಾ, ದಂಗೆಯೆ? ಇದು ಅಸಾಧ್ಯ. ಅಶಕ್ತರಾಗಿದ್ದು, ಪರರ ನಿರಂಕುಶ ಅಧಿಕಾರದಲ್ಲಿ ಸಿಲುಕಿ, ಗುಲಾಮರಂತೆ ನರಳುತ್ತಿರುವ ನಾವು, ದಂಗೆಯೆದ್ದು ಏನುಮಾಡಬಲ್ಲೆವು? ಮಾಲಕರು ಸರಕಾರದ ಸಹಾಯಪಡೆದು, ಸೈನ್ಯವನ್ನು ತರಿಸಿ, ಗುಂಡು ಹಾರಿಸಿದರೆಂದರೆ, ಕೂಲಿಯಾಳುಗಳು ನಿಷ್ಕಾರಣವಾಗಿ ಸಾಯಬೇಕಾಗುವುದು. ಅಲ್ಲದೆ, ಈಗ ಕೂಲಿಕಾರರಲ್ಲಿ ಜಾಗ್ರತಿ ಹುಟ್ಟಲಿಲ್ಲ. ಗಿರಣಿ ಅಧಿಕಾರಿಗಳ ಅತ್ಯಾಚಾರವು ಹೆಚ್ಚಾಗುತ್ತಾ ಹೋದಂತೆ, ನಮ್ಮವರ ಕಣ್ಣು ತೆರೆಯುವುದು. ಆಗ ನಾವು ಪ್ರಯತ್ನಿಸಿದವೆಂದರೆ, ಈ ಅನ್ಯಾಯದ ಕಾನೂನು ಶಿಸ್ತುಗಳನ್ನು ಮುರಿದಿಕ್ಕಬಹುದು. ಈಗ ಎಲ್ಲವನ್ನೂ ಸಹಿಸಿಕೊಳ್ಳೋಣ. ನಾನಿಂದು ತಿಂದ ಈ ಚಾಟೀ ಹೊಡೆತಂದಂಥಾ ಪೆಟ್ಟುಗಳನ್ನು ಎಲ್ಲರೂ ತಿನ್ನುವ ಸಂದರ್ಭಗಳು ಬಂದೇ ಬರುವವು. ಅಹಿಂಸಾವ್ರತಧಾರಿಗಳಾಗಿ, ಎಲ್ಲಾ ಬಾಂಧವರೂ ಈ ಹೊಡೆತಗಳನ್ನು ತಿಂದರೆಂದರೆ, ಲೋಕಕ್ಕೆ ನಮ್ಮ ನಿರಪರಾಧಿತ್ವವೂ ಅಧಿಕಾರಿಗಳ ಅತ್ಯಾಚಾರವೂ ಗೊತ್ತಾಗುವುದು.

**ಸುದರ್ಶನ:**—ಕ್ಷಮಿಸು ಮಿತ್ರಾ, ಇಂದು ನೀನು ಮಹತ್ಕಾರ್ಯವನ್ನು ಮಾಡಿರುವೆ. ನಿನ್ನ ಈ ಸ್ವಾರ್ಥತ್ಯಾಗವನ್ನು ಎಲ್ಲಾ ಬಡವರೂ ಅನುಸರಿಸುವಂತೆ ಪ್ರಯತ್ನಮಾಡುತ್ತೇನೆ.

**ಲಕ್ಷ್ಮಣ:**—(ಬೇರೆ ಪ್ರಸ್ತಾಪವೆತ್ತಿ) ಈಗ ಏನು ಮಾಡಲಿ. ಔಷದಿಗಾಗಿ ಹಣಬೇಡಲು ಹೋದ ನನಗೆ ಈ ಗತಿಯಾಯ್ತು. ನನ್ನ ಕಮಲೆಯು ಜ್ವರದಿಂದ ವಿಷಮಾವಸ್ಥೆಯಲ್ಲಿರುವಳು. ಆ ಮಹೇಂದ್ರನ

ಬಳಿಗೆ ಹಣಬೇಡಲು ನಾನಿನ್ನು ಹೋಗುವಂತಿಲ್ಲ. ಯಾವ ಉಪಾಯವೂ ಕಾಣುವುದಿಲ್ಲ.

**ಸುದರ್ಶನ:**—ಉಪಾಯವೇ ಮಿತ್ರಾ, ಈಗ ನಮ್ಮ ಗಿರಣಿಯ ಮಾಲಕರು, ಮನೆಯಲ್ಲಿರುವ ಸಮಯ. ತನ್ನ ಪತ್ನಿಯ ಇದಿರಲ್ಲಿ ಯಾರು ಏನು ಕೇಳಿದರೂ, ಅವಳ ಮನಸ್ಸು ಸಂತೋಷಪಡಿಸುವುದಕ್ಕಾಗಿ ಕೊಟ್ಟೇ ಕೊಡುತ್ತಾರೆ. ಅಲ್ಲಿಗೇ ಹೋಗುವುದು ಉತ್ತಮ.

**ಲಕ್ಷ್ಮಣ:**—(ಕೈಮುಗಿದು) ಆಗಲಿ, ಹಾಗೆಯೇ ಮಾಡುವೆನು. (ಹೋಗುವರು.)

---

## ೧೨. ಸಿದ್ದನ ಗುಡಿಸಲು.

(ಗೌರಿಯು ಒಳಗಿರುವಳು. ರಾಮುವೊಬ್ಬನೆ ಕೋಣೆಯಲ್ಲಿ ಆಡುತ್ತಿರುವನು. ಸಿದ್ದನು ಹೆದರುತ್ತಲೂ, ಹಿಂದು ಮುಂದು ನೋಡುತ್ತಲೂ, ಪ್ರವೇಶಿಸಿ ರಾಮುವನ್ನು ಕೈಸನ್ನೆಯಿಂದ ಬಳಿಗೆ ಕರೆದು)

**ಸಿದ್ದ:**—(ಶಬ್ದವಾಗದಂತೆ) ಸ್ೀ, ಸ್ೀ, ರಾಮೂ, ಅಮ್ಮ ಇಲ್ಲವೆ?

**ರಾಮು:**—ಇದ್ದಾಳೆ; ಕರೆಯಲೇ. (ಗಟ್ಟಿಯಾಗಿ) ಅಮ್ಮಾ, (ಸಿದ್ದನು ಕೂಡಲೇ ಆತನ ಬಾಯಿಗೆ ಕೈಹಿಡಿದು)

**ಸಿದ್ದ:**—ಸ್ೀ, ಸ್ೀ; ಬೇಡ, ಬೇಡ; ಕರಿಯೋದು ಬೇಡ. ನೀನೊಬ್ಬನೇ ಇದ್ದರೆ ನನಗೆ ಸಮಾಧಾನವಾಗುವುದು. ನಾನೀಗಲೆ ಬರುತ್ತೇನೆ. (ಮೆಲ್ಲನೆ ಅಡಿಯಿಡುತ್ತಾ ಹಿಂದಿರುಗುವನು. ತೆರೆಯಲ್ಲಿ ಗೌರಿಯ ಗರ್ಜನೆ)

**ಗೌರಿ:**—(ಒಳಗಿಂದಲೆ) ಹೋಗುವುದೆಲ್ಲಿಗೆ? ನಿಲ್ಲಿ. (ಸಿದ್ದನು ಬೆಚ್ಚಿಬಿದ್ದು ತಟಸ್ಥನಾಗಿ ನಿಂತು ಬಿಡುವನು. ಗೌರಿಯು ಒಳಗಿಂದ ಸರಸರನೆ ಸಿದ್ದನಿದ್ದಲ್ಲಿಗೆ ಬಂದು ದುರದುರನೆ ನೋಡುತ್ತ) ಹೋಗುವುದೆಲ್ಲಿಗೆ? ಹುಂ.

**ಸಿದ್ದ:**—(ಗಾಬರಿಗೊಂಡು) ಇ-ಇಲ್ಲ; ಎಲ್ಲಿಗಿಲ್ಲ . . . . ಹೀಗೆ ಗಾಳಿ ತಕ್ಕೊಳ್ಳಲಿಕ್ಕೆ. (ಆಕೆಯನ್ನು ನೋಡಿ ಭಯಮಿಶ್ರಿತವಾದ ಕಿರುನಗೆಯೊಂದು ಆತನ ಮುಖದಲ್ಲಿ ಕಾಣುವುದು)

**ಗೌರಿ:**—(ಮೂಗು ಹಾರಿಸುತ್ತಾ) ಗಾಳಿ ತಕ್ಕೊಳ್ಳಲಿಕ್ಕೆ. ದೊಡ್ಡ ಮನುಷ್ಯರಾದಿರಿ ನೀವು, ಗಾಳಿ ತಕೊಳ್ಳಲಿಕ್ಕೆ.

**ಸಿದ್ದ:**—(ಗೌರಿಗೆ ಪ್ರತಿ ಉತ್ತರಕೊಡಲು ಧೈರ್ಯವಿಲ್ಲದೆ ರಾಮುವನ್ನುದ್ದೇಶಿಸಿ) ನನಗೆ—ನಾನು ದೊಡ್ಡ ಮನುಷ್ಯನಲ್ಲವೇನೋ ರಾಮು?

**ಗೌರಿ:**—ಅದೆಲ್ಲಾ ಇರಲಿ; ಹಣವೆಲ್ಲಿದೆ?

**ಸಿದ್ದ:**—(ಮೌನ)

**ಗೌರಿ:**—(ಗಟ್ಟಿಯಾಗಿ) ಎಲ್ಲಿದೆ ಹಣ?

**ಸಿದ್ದ:**—(ಕೇಳದವನಂತೆ ನಟಿಸುತ್ತಾ) ಹುಂ . . . . ಹಣ.

**ಗೌರಿ:**—ಹೌದು ಹಣ, ಹಣ; ಕೊಡಿ ಬೇಗ.

**ಸಿದ್ದ:**—ಹಣವೇ? (ಏನು ಹೇಳುವುದೆಂದು ಗೊತ್ತಾಗದೆ ತಲೆತುರಿಸಿಕೊಳ್ಳುವನು)

**ಗೌರಿ:**—ನಿಮ್ಮ ಹುಡುಗಾಟಿಕೆ ಬೇಡಾ; ಜೋಕೆ.

**ಸಿದ್ದ:**—ಹುಡುಗಾಟಿಕೆಯಲ್ಲಪ್ಪಾ; ನಿಜ ಸಂಗತಿ.

**ಗೌರಿ:**—ಏನು ತರಲಿಲ್ಲವೆ?

**ಸಿದ್ದ:**—(ಹೇಳಲು ಹಿಂಜರಿಯುತ್ತಾ) ಹೌದು. . . . . ಅಲ್ಲ-ಹೌದು ಎಂದು ನಿನ್ನೊಡನೆ ಹೇಳಲು ಬಹಳ ದುಃಖವಾಗುವುದು.

**ಗೌರಿ:**—(ಕೋಪವು ತಲೆಗೇರಿತೋ ಎಂಬಂತೆ) ನಿಮ್ಮ ಬೆನ್ನಿನ ಸಿಪ್ಪೆ ತೆಗಿಲಿಕ್ಕೇ ಬೇಕು. ಎಲ್ಲಿ, ರಾಮೂ ಆ ಬೆತ್ತ ತಾ.

**ಸಿದ್ದ:**—(ಅಳುತ್ತಾ) ಬೇಡ ಮಾತಾಯಿ; ಬರೀ ಕೈಯಲ್ಲೇ ಮುಗಿಸಿಕೊಳ್ಳು. (ತಿರುಗಿ ನೋಡಿ ದೂರದಲ್ಲಿ ತನ್ನ ಮಿತ್ರ ರಂಗನು ಬರುತ್ತಿರುವುದನ್ನು ಕಂಡು, ಆತನಿಗೆ ತನ್ನ ಅವಸ್ಥೆಯನ್ನು ತಿಳಿಸಬಾರದೆಂದು, ತನ್ನ ಪತ್ನಿಯನ್ನು ಉದ್ದೇಶಿಸಿ) ಹೇ ಸಾವಿತ್ರೀ, ದಮಯಂತೀ, ಸೀತಾ, ಕೊಂಚ ತಾಳು. ನನ್ನ ಮಿತ್ರನೊಬ್ಬನು ಈ ಕಡೆ ಬರುತ್ತಿರುವನು. ನನ್ನನ್ನು ಈ ಅವಸ್ಥೆಯಲ್ಲಿ ನೋಡಿದನೆಂದರೆ ಮತ್ತು ನಾನು ಜೀವ ಇಟ್ಟು ಕೊಳ್ಳುವಂತಿಲ್ಲ. ನಾನು ಕೂಡಲೇ ಬಾಗಿಲಿಕ್ಕಿ ಬರುತ್ತೇನೆ. ಮತ್ತೆ ನೀನು ನನಗೆ ಬೇಕಾದಷ್ಟು ಹೊಡೆ. ಆದರೆ ನೀನು ಹೊಡಿಯುತ್ತಿರೋ ಸಮಯದಲ್ಲಿ, ನಾನು

ನಿನಗೆ ಗವರಿಸುವೆನು. ಪ್ರತ್ಯುತ್ತರ ಕೊಡದಷ್ಟು ಉದಾರ ಬುದ್ಧಿ ತೋರಿಸಿ ಬಿಡು.

**ಗೌರಿ**:— ಹುಂ, ತಡವಾದರೆ ನನ್ನ ಕೋಪ ಇಳಿಯುತ್ತದೆ.

**ಸಿದ್ದ**:—(ತೆರೆಗೆ ಹೋಗಿ ಗಟ್ಟಿಯಾಗಿ) ಏ, ಮಿತ್ರಾ, ಸ್ವಲ್ಪ ನಿಲ್ಲು; ನನ್ನಾಕೆ ಬಾರಿ ಸೊಕ್ಕಿದ್ದಾಳೆ. ಅವಳ ಸೊಕ್ಕು ಇಳಿಸುತ್ತೇನೆ; ನೋಡೂ. ಕೇಳು ಹೊರಗಿನಿಂದ, ಏನೆಲ್ಲಾ ಆಗುತ್ತದೆಂತ. (ಮೆಲ್ಲನೆ ಬರುವನು.)

**ಗೌರಿ**:—(ಕೋಪದಿಂದ) ಹೂಂ, ಏನು ಹೇಳಿದಿರಿ? ನನ್ನ ಸೊಕ್ಕು ಇಳಿಸುತ್ತೀರಾ? (ಬೆತ್ತದಿಂದ ಹೊಡೆಯಲು ಪ್ರಾರಂಬಿಸುವಳು)

**ಸಿದ್ದ**:—(ತನ್ನ ಸ್ನೇಹಿತನಿಗೆ ಕೇಳುವಂತೆ ಗಟ್ಟಿಯಾಗಿ) ಸಾಕೊ ಹೇಳು; ಅಡಿಗೆ ಹೊತ್ತಿಗೆ ಸರಿಯಾಗಿ ಮಾಡೋದಿಲ್ಲ; ನಿನ್ನ ಸೊಂಟ ಮುರಿದು ಹಾಕುತ್ತೇನೆ; ಸೊಕ್ಕಿರುವಿ: ಸುಟ್ಟ ಮೋರೆಯವಳೆ; ಇಗೊ ತಕ್ಕೊಳ್ಳು. (ಸಿದ್ದನ ಬೆನ್ನಿಗೆ ಗುದ್ದುಬೀಳುವುದು, ನೋವು ತಡೆಯಲಾರದೆ ಅಳುದನಿಯಿಂದ) ಹೇಳು, ದಮ್ಮಯ್ಯಾ ಹೊಡಿಯ ಬೇಡಿ— ಹೇಳು; ಕಾಲುಹಿಡಿಯುತ್ತೇನೆ- ಹೇಳು; ಎಷ್ಟು ಪೆಟ್ಟು ತಿನ್ನಲಪ್ಪಾ— ಹೇಳು. (ಪೆಟ್ಟಿನ ನೋವು ತಡೆಯ ಲಾರದೆ) ಅಯ್ಯೋ ಹೇಳು-ಇಷ್ಟು ಹಟವೇ?-ಬೆನ್ನೆಲ್ಲಾ ಬಾತು ಹೋಯಿತು, ನಿನ್ನದು; ಹೇಳು- ಸಾಕೊ ಸಾಕು ಹೇಳು. (ಕೆಳಗೆ ಬೀಳುವನು.)

**ಗೌರಿ**:—(ಆಯಾಸದಿಂದ ಉಬ್ಬಸ ತೆಗೆಯುತ್ತಾ) ಬೇಗ ತನ್ನಿ-ಹಣ! (ಹೋಗುವಳು).

**ಸಿದ್ದ**:—(ಬಿದ್ದಲ್ಲಿಂದಲೇ ಗಟ್ಟಿಯಾಗಿ) ಅಳ ಬೇಡ- ನಿನಗೆ ಬುದ್ಧಿ ಬರ ಲೆಂದು ಹೊಡೆದುದು-ಇನ್ನು ಹಟ ಹಿಡಿಯಬೇಡ; ಗಾಯಕ್ಕೆಲ್ಲಾ ಮುಲಾಮು ಹಾಗಿಸು. ಹೋಗು- ನಾಚಿಕೆಯಿಲ್ಲದವಳು- ಎಷ್ಟು ಪೆಟ್ಟು ತಿಂದರೂ ಮರ್ಯಾದೆ ಇಲ್ಲ; ನನಗೆ ಹೆಂಡತಿ ಸಿಕ್ಕಿದ್ದೇ. ಎಲ್ಲಿ ಗಂಟು ಬಿದ್ದಳೊ ದೇವರೇ ಇವಳು ನನಗೆ. ನನ್ನ ಮಿತ್ರ ಕಾದುನಿಂತಿದ್ದಾನೆ. ಇಲ್ಲವಾದರೆ ನಿನ್ನ ಚರ್ಮ ಸುಲಿಯಬೇಕೆಂದಿದ್ದೆ. (ನೋವು ತಡೆಯಲಾರದೆ ನರಳುತ್ತಾ ಅಂಗಾಂಗಳನ್ನು ಸವರುತ್ತಾ ಒಳಗೆ ಹೋಗುವನು.)

---

## ೧೩. ಮಾರ್ಗ.

(ಮುಕ್ತಾಬಾಯಿಯು ಯಾವಾಗಲೂ ಮೋಟಾರು ಕಾರಿನಲ್ಲಿ ತಿರುಗಾಡು ತಿದ್ದವಳು ಇಂದು ಕಾಲುನಡೆಯಿಂದಲೇ ಕ್ಲಬ್ಬಿಗೆ ಬೆಡಗಿನಿಂದ ಹೊರಟಿರುವಳು.)

ಪೀಲು—ಗಝಲ್

**ಮುಕ್ತಾ:**—ಬಾರನೇ ಮನೋಜ್ಞನಮಮಾ ।
ಖೇದಸಾಂತೆನೇ ಮನದೇ ॥
ಖೇದವಾಂತೆನೇ ಮನದೇ ।
ಮೋದದಾಯಕಾನಿರದೇ ॥

ಹರುಷಗಾರನಿಲ್ಲದೆನಗೆ ।
ಹರುಷವಿಲ್ಲ ಮನಸಿನೊಳಗೆ ॥
ಬರುವೆನೆಂದು ಜವದಿ ಪೇಳೀ ।
ಬರಲದೇನು ವೇಳೆಯಮಮಾ ॥

ಯಜಮಾನರು ಬೆಂಗಳೂರಿನಿಂದ ಇನ್ನೂ ಬಂದಿಲ್ಲ. ಈ ಹೊತ್ತು ಖಂಡಿತ ಬರುವೆನೆಂದು ಪತ್ರ ಬರೆದಿದ್ದರು. ಅಲ್ಲಿನ ಗಲಾಟೆ ಇನ್ನೂ ಮುಗಿದಿರಲಿಕ್ಕಿಲ್ಲ. ಎಂಥಾ ನೀಚರು ಈ ಕೂಲಿಯವರು; ನಾನು ತವರುಮನೆಯಿಂದ ಬಂದು ಒಂದು ವಾರವಾಗಲಿಲ್ಲ. ಪತಿಯವರು ನನ್ನನ್ನು ಬಿಟ್ಟು, ಇವರ ಕಾಟದಿಂದಾಗಿ ಬೆಂಗಳೂರಿಗೆ ಓಡಬೇಕಾಯಿತು. ಮನೆಯಲ್ಲಿ ಕೂತು ಕೂತು ಬೇಸರಿಕೆ ಹತ್ತಿದೆ. ಕಾರಿನಲ್ಲಿ ತಿರುಗಿ ತಿರುಗಿ ಕಾರೇ ಬೇಡವಾಗಿದೆ; ಆದುದರಿಂದ, ಕ್ಲಬ್ಬಿಗೆ ನಡೆದೇ ಹೋಗೋಣವೆಂದು ಹೊರಟೆ. (ಸೀರೆಯನ್ನು ನೋಡಿ) ಈ ಸೀರೆಯನ್ನು ನೋಡುವುದೇ ಬೇಡವೆನ್ನಿಸುತ್ತದೆ; ಉಟ್ಟ ಸೀರೆಗಳನ್ನೇ ಎಷ್ಟು ಸಾರೆ ಉಡುವುದು? ಬೆಂಗಳೂರಿನಿಂದ ಬರುವಾಗ ಉತ್ತಮ ಪ್ಯಾರಿಸ್ ಸಿಲ್ಕಿನ ಸೀರೆಯನ್ನು ತರುವೆನೆಂದು ಹೇಳಿದ್ದರು. ಆದರೆ ಅವರೆಂದು ಬರುವರೊ? ನಾಳೆ ಗವರ್ನರರ ಪತ್ನಿಯವರು ಮಹಿಳಾ ಕ್ಲಬ್ಬನ್ನು ಸಂದರ್ಶಿಸುವವರಿದ್ದಾರೆ; ಆಗ ನಾನು ಹಳೆಯ ಸೀರೆಯನ್ನುಟ್ಟೇ ಹೋಗಬೇಕಾಗುವುದೋ ಏನೊ. ದೇವಾ, ಏನುಮಾಡಲಿ.

(ಅಷ್ಟರಲ್ಲಿ, ರಾಯರ ಗಿರಣಿಯ ಹಳೆಯ ಹೆಡ್‌ಕ್ಲಾರ್ಕನೂ, ಸೀರೆ ಡಿಪಾರ್ಟ್‌ಮೆಂಟಿನ ಹೊಸ ಸೇಲ್ಸ್‌ಮೇನನೂ, ಪ್ರವೇಶಿಸುವರು. ಗುಮಾಸ್ತನು ಮುಕ್ತಾಬಾಯಿಯನ್ನು ನೋಡಿ ನಮಸ್ಕಾರಮಾಡುವನು.)

**ಮುಕ್ತಾ:**—(ಅವನ ನಮಸ್ಕಾರವನ್ನು ಲಕ್ಷಿಸದೆ) ಹೆಡ್‌ಕ್ಲಾರ್ಕರೇ ಯಜಮಾನರು ಬಂದರೇ?

**ಹೆಡ್‌ಕ್ಲಾರ್ಕ್:**—ಗೊತ್ತಿಲ್ಲ ಅಮ್ಮನವರೇ; ಈ ಹೊತ್ತು ಮೂರು ಗಂಟೆಯ ಗಾಡಿಗೆ ಬರುತ್ತೇನೆಂದು ಹೇಳಿದ್ದರು; ಅದಲ್ಲದೆ, ಮಿಲ್ ಓನರ್ಸ್ ಮೀಟಿಂಗು ಕೂಡಾ ಈ ಹೊತ್ತು ಮೂರು ಗಂಟೆಗೆ ಇತ್ತು. ನಾನು ಕೆಲಸದ ಸಂಬಂಧ ಪೇಟೆಗೆ ಹೋಗಿದ್ದೆ.

**ಮುಕ್ತಾ:**—ಬೆಂಗಳೂರಿನ ಗಿರಣೀ ಮುಷ್ಕರವೇನಾಯಿತು ಗೊತ್ತೆ?

**ಹೆಡ್‌ಕ್ಲಾರ್ಕ್:**—ಸರಿಯಾದ ಸುದ್ದಿ ಗೊತ್ತಾಗಲಿಲ್ಲ ಅಮ್ಮನವರೆ.

**ಮುಕ್ತಾ:**—(ಒಟ್ಟಿಗಿದ್ದ ಮತ್ತೊಬ್ಬನನ್ನು ನೋಡಿ) ಇವರಾರು?

**ಹೆಡ್‌ಕ್ಲಾರ್ಕ್:**—ಇವರು ನಮ್ಮ ಸೀರೆ ಡಿಪಾರ್ಟ್‌ಮೆಂಟಿನ, ಹೊಸ ಸೇಲ್ಸ್‌ಮೇನರು. ಸೀರೆ ವ್ಯಾಪಾರದಲ್ಲಿ ಬಹಳ ಅನುಭವವಿದ್ದವರು. ಇವರಿಂದಲೇ ನಮ್ಮ ಸೀರೆ ಡಿಪಾರ್ಟುಮೆಂಟು ಬಹಳ ಉತ್ತಮ ರೀತಿಯಲ್ಲಿ ನಡೆದದೆ. ಎಲ್ಲಿ ಹೋದರೂ ನಮ್ಮ ಸೀರೆಗಳೇ ಖರ್ಚಾಗುತ್ತವೆ.

**ಮುಕ್ತಾ:**—(ಗೊತ್ತಾದವಳಂತೆ) ಯಜಮಾನರೂ ಇವರ ವಿಷಯ ನನ್ನ ಕೂಡೆ ಅನೇಕ ಬಾರಿ ಹೇಳಿದ್ದರು. ನೀವು ಭೆಟ್ಟಿಯಾದುದು ಒಳಿತೇ ಆಯಿತು; ನಾಳೆ ಮುಂಜಾನೆ ಮಹಿಳಾ ಕ್ಲಬ್ಬಿಗೆ ಗವರ್ನರರ ಪತ್ನಿ ಬರುತ್ತಾರೆ, ನನ್ನೊಡನೆ ಒಂದೂ ಹೊಸ ಸೀರೆಯಿಲ್ಲ. ಸೇಲ್ಸ್‌ಮೇನರೆ, ನೀವು ಈಗಲೆ ಪೇಟೆಗೆ ಹೋಗಿ, ಉತ್ತಮವಾದ ಸೀರೆಯನ್ನು ತಗೊಂಡು ಬನ್ನಿರಿ. ನಾನು ಮನೆಯಲ್ಲೇ ಇರುವೆನು, ಬೇಗನೇ ತನ್ನಿರಿ. (ಹೋಗುವಳು.)

**ಸೇಲ್ಸ್‌ಮೇನ್:**—(ಆಕೆಯನ್ನೇ ಸ್ವಲ್ಪ ಹೊತ್ತಿನ ತನಕ ನೋಡುತ್ತಿದ್ದು, ಆಶ್ಚರ್ಯದಿಂದ) ಇವರೇ ಏನು ನಮ್ಮ ಮಾಲಕರ ಹೆಂಡತಿ? ನೋಡಿದ್ದಿಲ್ಲ ಇವರನ್ನು ನಾನು ಈ ವರೆಗೆ. ಪ್ರಥಮ ದರ್ಶನದಲ್ಲಿಯೇ ಒಂದು ಬಿಟ್ಟೀ ಕೆಲಸವು ದೊರಕಿತು.

**ಹೆಡ್‌ಕ್ಲಾರ್ಕ್**:—(ಅವನ ಬೆನ್ನ ಮೇಲೆ ಚಪ್ಪರಿಸಿ) ನಿಮ್ಮ ಪುಣ್ಯ ವೆಂದು ತಿಳಿಯಿರಿ. ಅವರ ಮನ ಮೆಚ್ಚಿಸಿದಿರೆಂದರೆ ಯಜಮಾನರಿಂದ ಬೇಕಾದ ಸವಲತ್ತು ಸಿಕ್ಕುವುದು. ನಮ್ಮ ರಾವ್ ಬಹದ್ದೂರರು ಗಿರಣಿ ಯಲ್ಲಿ ಅಷ್ಟು 'ಗರಂ' ಇದ್ದರೂ ಮನೆಯಲ್ಲಿ ಹೆಂಡತಿ ಹೇಳಿದ ಹಾಗೆ. ಅವಳ ಒಂದು ಮಾತನ್ನೂ ಮೀರುವವರಲ್ಲ.

**ಸೇಲ್ಸ್‌ಮೇನ್**:— ಅದು ಸರಿ; ಆದರೆ, ಊರೆಲ್ಲಾ 'ಸ್ವದೇಶೀ ಸೀರೆ ಗಳಿಗೆ ಪ್ರೋತ್ಸಾಹ ಕೊಡಿರಿ,' ಎಂದು ಹೇಳುತ್ತಾ ತಿರುಗುವ ನಾನೇ, ಈಗ ಇವರಿಗಾಗಿ ಪರದೇಶಿ ಸೀರೆ ತಗೊಂಡರೆ, ಜನರು ನನಗೆ ಏನು ಹೇಳ್ಯಾರು? ಸಾಳೆ ನಮ್ಮ ಸೀರೆ ನಾನು ಹೇಗೆ ಮಾರುವುದು?

**ಹೆಡ್‌ಕ್ಲಾರ್ಕ್**:— ಮಾಲಕರ ಪತ್ನಿಗೆಂದು ಹೇಳಿರಿ.

**ಸೇಲ್ಸ್‌ಮೇನ್**:— ಜನರು ಕೇಳಲಿಕ್ಕಿಲ್ಲವೆ–'ನಿಮ್ಮ ಗಿರಣಿ ಸೀರೆ ನಿಮ್ಮ ಮಾಲಕರ ಮನೆಯವರೇ ಉಡುವುದಿಲ್ಲ. ಮತ್ತು ನಮಗೆ ಉಡು ವಂತೆ ಹೇಳುತ್ತೀರಾ' ಎಂದು?

**ಹೆಡ್‌ಕ್ಲಾರ್ಕ್**:— ಅದು ನಿಜವೆ. ಆದರೆ, ಯಜಮಾನಿಯವರ ಮಾತು ಮೀರುವುದಕ್ಕಾಗುವುದೆ; ಮಾಡುವುದೇನು?

**ಸೇಲ್ಸ್‌ಮೇನ್**:— ಮಾಡುವುದೇನು? ಗಿರಣಿಯಲ್ಲೆ ತಯಾರಾದ ಸೀರೆಯೊಂದನ್ನು ಕೊಂಡು ಹೋಗಿ ಕೊಡುವುದು. ತನ್ನ ಗಿರಣಿಯಲ್ಲಾದ ಸೀರೆಯನ್ನು ಉಟ್ಟುಕೊಳ್ಳುವುದಕ್ಕಿಂತ, ಹೆಚ್ಚಿನ ಭೂಷಣ ಯಾವುದು? ಭಾರತ ಮಾತೆಯು ಆರ್ಥಿಕ ದುಸ್ಥಿತಿಯಲ್ಲಿ ನರಳುತ್ತಿರುವಾಗ, ಈ ಶ್ರೀಮಂತ ಸ್ತ್ರೀ ಪುರುಷರು, ಪರದೇಶಿಗಳಿಗೆ ದುಡ್ಡು ಸುರಿಸುತ್ತಿರುವರು. ಸ್ವಾಭಿಮಾನವೂ ನಷ್ಟವಾಗಿದೆ ಇವರಿಗೆ. ನಮ್ಮ ಗಿರಣಿಯಲ್ಲಿ ಹೊಸ ಮಾದರಿ 'ಚರ್ಕಾಪೇಟರ್ನ್' ಸೀರೆ ಇಂದೇ ಹೊರ ಬಂದಿದೆಯಲ್ಲಾ; ಅದನ್ನೇ ಕೊಂಡು ಹೋಗಿ ಕೊಡುವೆನು.

**ಹೆಡ್‌ಕ್ಲಾರ್ಕ್**:— ಏನೋ ಅಪ್ಪ ನಿಮ್ಮ ಯುವಕರ ಸಾಹಸ; ಹೇಳಿದ ಕೆಲಸ ಮಾಡೋದು ಬಿಟ್ಟು, ಇಲ್ಲದ ಖಟಪಿಟಿ ಮಾಡುತ್ತೀರಿ. ಯಜಮಾನಿಯವರು ಕೋಪಿಸಿಕೊಂಡಾರು, ನನಗೇನು? ನನಗೆ 'ರಿಟಾ ಯರ್' ಆಗಲಿಕ್ಕೆ ಹತ್ತಿರ ಆಯಿತು. ಬನ್ನಿ ಹೋಗೋಣ. (ಹೋಗುವರು.)

---

## ೧೪. ಜಗಜೀವನರಾಯರ ದಿವಾಣಖಾನೆ.

(ಮಧ್ಯದಲ್ಲಿ ಸೋಫ. ಅದರ ಇಕ್ಕಡೆಗಳಲ್ಲೂ ದೊಡ್ಡ ನಿಲುವುಗನ್ನಡಿ. ಮುಕ್ತೆಯು ಕೂತಿದ್ದು, ಯಾರನ್ನೋ ನಿರೀಕ್ಷಿಸುತ್ತಿರುವಳು. ಅಷ್ಟರಲ್ಲಿ ಕೂಲಿ ಯುವನೊಬ್ಬನು ಸೀರೆಯ ಕಟ್ಟೊಂದನ್ನು ಹಿಡಿದುಕೊಂಡು, ಬಂದು ವಂದಿಸಿ ಕಟ್ಟನ್ನು ಎದುರಿಗಿಡುವನು.)

**ಕೂಲಿ:**—ಸೇಲ್ಸ್‌ಮೇನರು ಈ ಸೀರೆಯನ್ನು ಕಳುಹಿಸಿರುವರು ಅಮ್ಮನವರೇ.

**ಮುಕ್ತಾ:**—(ಗಂಟನ್ನು ಬಿಚ್ಚಿ, ಅದರಲ್ಲಿ ಜಗಜೀವನ ಮಿಲ್ಲಿನ ಲೇಬಲಿರುವ ಹತ್ತಿ ಸೀರೆಯನ್ನು ನೋಡಿ) ಏನು? ಸೇಲ್ಸ್‌ಮೇನರು ಕಳುಹಿಸಿರುವರೆ ಇದನ್ನು,—ಯಾರಿಗೆ?

**ಕೂಲಿ:**—(ಭಯದಿಂದ) ತಮಗೆ, ಅಮ್ಮನವರೇ. ನಮ್ಮ ಗಿರಣಿಯಲ್ಲಿ ಇಂದೇ ಹೊಸದಾಗಿ ತಯಾರಾದ ನಮೂನೆ ಇದು. ನಮ್ಮ ಗಿರಣಿಯಲ್ಲಿ ಈಗೀಗ ಬಹಳ ಒಳ್ಳೆ ವಸ್ತ್ರಾಲು ತಯಾರಾಗುತ್ತಿದೆ. ನೀವು ಉಟ್ಟರೆ ಎಷ್ಟು ಶೋಭೆ ಅಮ್ಮನವರೇ?

**ಮುಕ್ತಾ:**—ಬಾಯಿ ಮುಚ್ಚು ಮೂರ್ಖ. ಏನು; ಸೇಲ್ಸ್‌ಮೇನರು ನನಗೆ ಅವಮಾನ ಪಡಿಸಲು ಕಳುಹಿಸಿರುವರೊ ಇದನ್ನು?

**ಕೂಲಿ:**—(ವಿನಯತೆಯಿಂದ) ಅಲ್ಲ ತಾಯಿ, ನಮ್ಮ ಗಿರಣಿದ್ದು ಅಂತ ಅಭಿಮಾನದಿಂದ ಕಳುಹಿಸಿದ್ದಾರೆ ತಾಯಿ.

**ಮುಕ್ತಾ:**—(ತಿರಸ್ಕಾರದಿಂದ) ನಮ್ಮ ಗಿರಣಿದ್ದು ಅಂತ ಅಭಿಮಾನ ದಿಂದ. ಊ ಹುಂ; ಇದೇನೋ ಕೂಲಿಕಾರರ ಯೋಜನೆಯೊಂದು ತೋರು ತ್ತದೆ. ಯಜಮಾನರು ಬರಲಿ; ನಿಮಗೆ ಒಳ್ಳೇ ಬುದ್ಧಿ ಕಲಿಸುತ್ತೇನೆ.

(ಕೂಲಿಯು ಹೆದರಿ ಸುಮ್ಮನೆ ನಾಲ್ಕು ಕಡೆ ನೋಡುತ್ತಾ ನಿಲ್ಲುವನು. ಜಗ ಜೀವನ ರಾಯರು ಪ್ರವೇಶಿಸಿ ಮುಕ್ತೆಯ ರೌದ್ರಾವತಾರವನ್ನು ನೋಡಿ)

**ಜಗಜೀವನ:**—ರಾಣೀ ಸಾಹೇಬರು ಬಹಳೇ ಕೋಪಿಸಿರುವರು. ಏನು ಗಂಡಾಂತರ?

**ಮುಕ್ತಾ:**—ನಾಳೆಯೇ ನಿಮ್ಮ ಸೇಲ್ಸ್‌ಮೇನನನ್ನೂ ಈ ಕೂಲಿಯವನನ್ನೂ ಕೆಲಸದಿಂದ ತೆಗೆದು ಹಾಕಬೇಕು.

**ಜಗಜೀವನ:**—(ಆಶ್ಚರ್ಯದಿಂದ) ಯಾಕೆ? ನಮ್ಮ ಸೇಲ್ಸ್‌ಮೇನನು ಬಹಳ ಚತುರನು. ಜನರ ಸ್ವದೇಶಿ ಹುಚ್ಚಿನ ಉಪಯೋಗ ಮಾಡಿಕೊಳ್ಳುವುದರಲ್ಲಿ ಅವನಷ್ಟು ನಿಪುಣರು ಯಾರೂ ಇಲ್ಲ.

**ಕೂಲಿ:**—(ಸ್ವಲ್ಪ ಧೈರ್ಯದಿಂದ ರಾಯರಿಗೆ ಕೈ ಮುಗಿದು) ಹೌದು ಬುದ್ದಿ, 'ಸ್ವದೇಶೀ ಅರಿವೆ ಉಡಬೇಕೂ ಅಂತ, ದೊಡ್ಡ ಮನ್ಶರು ಹೇಳ್ತಾರೆ ಅಂತ' ಸೇಲ್ಸ್‌ಮೇನರು ಒಳ್ಳೇ ಸ್ವದೇಶೀ ಸೀರೆ ಅಮ್ಮನವರಿಗೆ ಕಳಿಸಿದ್ರು ಬುದ್ದೀ. ಅಮ್ಮನವರು ಯಾಕೊ ಕೋಪ ಮಾಡಿಕೊಂಡಾರೆ. (ಹೆದರುತ್ತಾ ಮುಕ್ತೆಯನ್ನು ನೋಡುವನು.)

**ಮುಕ್ತಾ:**—(ಅಧಿಕಾರ ವಾಣಿಯಿಂದ) ನನಗೆ ಸ್ವದೇಶೀ ಹುಚ್ಚು ಹಿಡಿಯಲಿಲ್ಲ. (ಆ ಹತ್ತಿಯ ಸೀರೆಯನ್ನು ಕೂಲಿಯವನ ಮೇಲೆ ಬಿಸಾಡಿ) ಈ ಸೀರೆಯನ್ನು ಉಟ್ಟುಕೊಂಡು, ನಾನು ಗವರ್ನರರ ಪತ್ನಿಗೆ 'ಶೇಕ್‌ಹ್ಯಾಂಡ್' ಕೊಡಲೆ? ಉತ್ತಮ ಸಿಲ್ಕಿನ ಸೀರೆಯನ್ನು ಕಳುಹಿಸೆಂದರೆ, ಈ ಸೀರೆಯನ್ನು ಕಳುಹಿಸಿದ್ದಾನೆ ನಿಮ್ಮ ಉದ್ಧಟ ಸೇಲ್ಸ್‌ಮೇನ್. ಅವನನ್ನು ಕೆಲಸದಿಂದ ತೆಗೆದು ಹಾಕದೆ ನಾನು ಊಟ ಮಾಡಲಾರೆನು. (ಮುಖ ತಿರುಗಿಸಿ ನಿಲ್ಲುವಳು.)

**ಜಗಜೀವನ:**—(ಸಮೀಪಕ್ಕೆ ಬಂದು ಆಕೆಯ ಬೆನ್ನ ಮೇಲೆ ಕೈಯಾಡಿಸಿ ನಸುನಗುತ್ತಾ) ಸುಮ್ಮನೆ ಕೋಪಗೊಳ್ಳಬೇಡ; ನಿನ್ನ ಮರ್ಜಿ, ಆ ಸೇಲ್ಸ್‌ಮೇನನಿಗೆ ಏನು ಗೊತ್ತು? ಆದ್ದರಿಂದ ಇದನ್ನು ಕಳುಹಿಸಿರಬಹುದು. ಅವಮಾನ ಮಾಡುವವನಲ್ಲ ಅವನು. (ಕೂಲಿಯವನನ್ನುದ್ದೇಶಿಸಿ) ಎಲೋ, ಈ ಸೀರೆಯನ್ನು ತೆಗೆದುಕೊಂಡು ಹೋಗು, ಮತ್ತು ನಮ್ಮ ಗಿರಣಿಯಲ್ಲಾದ ಅರಿವೆ, ನಮ್ಮ ಮನೆಗೆ ತರಕೂಡದೆಂದು ಹೇಳು. ಆ ಅರಿವೆಯೆಲ್ಲಾ ಬಾಜಾರಿಗೆ, ನಮಗಲ್ಲ; ತಿಳಿಯಿತೇ?

**ಕೂಲಿ:**—(ಕೈ ಮುಗಿದು) ಅಪ್ಪಣೆ ಬುದ್ದಿ. (ಸೀರೆಯನ್ನು ಹೆಕ್ಕಿಕೊಂಡು ಹೋಗುವನು.)

**ಜಗಜೀವನ:**—ಮುಕ್ತಾ, ಪ್ಯಾರಿಸ್ ಸಿಲ್ಕ್ ಏಜಂಟನನ್ನು ಉತ್ತಮ ಸೀರೆಗಳನ್ನು ತಗೊಂಡು, ಇಲ್ಲಿಗೆ ಬರಲು ಹೇಳಿ ಬಂದಿದ್ದೆನು; ಅವನು ಬಂದಿರಬೇಕು. ನಿನಗೆ ಬೇಕಾದುದನ್ನು 'ಸಿಲೆಕ್ಟ್' ಮಾಡು. ಗಂಪೂ, (ಚಾಕರಿ ಹುಡುಗ) ಆ ಸಾಹೇಬರನ್ನು ಕರಿಯೊ. (ಗಂಪು ಹೋಗುವನು. ಸಾಹೇಬನು ಗಂಟೊಂದನ್ನು ಹಿಡಿದುಕೊಂಡು ಬಂದು ಸಲಾಂ ಮಾಡುವನು)

**ಸ್ವಾಬ:**—(ಕಟ್ಟು ಬಿಚ್ಚಿ ಒಂದು ಸೀರೆಯನ್ನು ತೆಗೆದು, ಮುಕ್ತೆಗೆ ತೋರಿಸುತ್ತಾ) ಬಾಯಿ ಸಾಹೇಬ, ಇದನ್ನು ನೋಡೋಣಾಗಲಿ. ಇದು ಬಂಗಾರದ ಜರಿಯ ಸೀರೆ. 500 ರೂಪಾಯಿ ಬೆಲೆಯಿದೆ. ನಿಮಗೆ ಸೊಗಸಾಗಿ ಒಪ್ಪಬಹುದು.

(ಮುಕ್ತೆಯು ಅದನ್ನು ತೆಗೆದುಕೊಂಡು ಕನ್ನಡಿಯ ಬಳಿಗೆ ಹೋಗಿ, ಸೀರೆಯನ್ನು ಬಿಡಿಸಿ ತನ್ನ ಮೈ ಮೇಲೆ ಹಾಕಿ, ಕನ್ನಡಿಯಲ್ಲಿ ಸೀರೆಯ ಸೌಂದರ್ಯವನ್ನು ನೋಡಿ, ಅತೃಪ್ತಿಯಿಂದ ಅದನ್ನು ಕೆಳಗೆ ಬಿಸಾಡುವಳು. ವ್ಯಾಪಾರಿಯು ಸ್ವಲ್ಪ ಹೆದರಿ ಪುನಃ ಒಂದು ಉತ್ತಮ ಸೀರೆಯನ್ನು ತೋರಿಸಿ)

**ಸ್ವಾಬ:**—ರಾಯರೇ, ಇದು ನನ್ನ ಕಂಪೆನಿಗಾಗಿ, ಪ್ಯಾರೀಸಿನಲ್ಲಿ 'ಸ್ಪೆಶ್ಯಲಾ'ಗಿ ತಯಾರಿ ಆದುದು. ಇದನ್ನು ಯಜಮಾನಿಯವರಿಗೆ ತೋರಿಸಿರಿ. ಇದಕ್ಕೆ 600 ಖರೀದಿ. (ರಾಯರ ಕೈಯಲ್ಲಿ ಕೊಡುವನು. ರಾಯರು ಅದನ್ನು ಮುಕ್ತೆಯ ಕೈಯಲ್ಲಿ ಕೊಟ್ಟು)

**ಜಗಜೀವನ:**—ಆಹಾ, ಬಹಳ ಸೊಗಸಾಗಿದೆ. ಪ್ರಿಯೆ, ಇದನ್ನು ನೋಡೋಣಾಗಲಿ. (ಮುಕ್ತೆಯು, ಮೊದಲಿನಂತೆ ಕನ್ನಡಿಯಲ್ಲಿ ಸೀರೆಯ ಸೌಂದರ್ಯವನ್ನು ನೋಡಿ, ಅಸಮಾಧಾನದಿಂದ ಸೀರೆಯನ್ನು ಪುನಃ ಬಿಸುಟು)

**ಮುಕ್ತಾ:**—ಹಾ! ಇದೂ ನನಗೆ ತೃಪ್ತಿ ಕೊಡುವುದಿಲ್ಲ. (ಸೋಫದ ಮೇಲೆ ಕೂತು ಮತ್ತೊಂದು ನೀಲೀ ಸೀರೆಯನ್ನು ತೋರಿಸಿ) ಆ ನೀಲಿ ಸೀರೆಯನ್ನು ತೋರಿಸಿರಿ.

**ಸ್ವಾಬ:**-ಅಪ್ಪಣೆ ಬಾಯಿ ಸಾಹೇಬ್. (ಅವಸರದಿಂದ ತೆಗೆದು ರಾಯರ ಕೈಯಲ್ಲಿ ಕೊಡುವನು. ರಾಯರು ಮುಕ್ತೆಯ ಕೈಯಲ್ಲಿ ಕೊಟ್ಟು)

**ಜಗಜೀವನ:**—ಇದು ನನಗಷ್ಟು ಚಲೊ ಕಾಣೋದಿಲ್ಲ.

**ಮುಕ್ತಾ:**—(ಕನ್ನಡಿಯ ಬಳಿಗೆ ಹೋಗಿ, ಸೀರೆಯನ್ನು ಮೈಯಲ್ಲಿ ಹಾಕಿ ಅತ್ತ ಇತ್ತ ತಿರುಗಿ ಸಂತೋಷದಿಂದ) ಆಹಾ! ಎಷ್ಟು ಸೊಗಸಾಗಿದೆ. ಇದು ನನಗೆ ಚೆನ್ನಾಗಿ ಒಪ್ಪುವುದು. (ನಗುತ್ತಾ ಮುಂದೆ ಬಂದು) ಇದರ ಬೆಲೆ ಯೇನು?

**ಸ್ವಾಬ:**—(ಅಂಗೈ ಸವರುತ್ತಾ) 800 ರೂಪಾಯಿಗಳು ಬಾಯಿ ಸಾಹೇಬ್.

**ಮುಕ್ತಾ:**—ಅಷ್ಟೆ ತಾನೆ. (ರಾಯರನ್ನು ನೋಡುತ್ತಾ) ಹಾಗಾದರೆ, ಮುಂಚಿನ ಆ ಎರಡು ಸೀರೆಗಳನ್ನೂ ಕೊಡಿರಿ. (ಪುನಃ ರಾಯರನ್ನು ನೋಡು ವಳು. ರಾಯರು ಮಾತೆತ್ತದೆ ಚೆಕ್ ಬರೆದು ಕೊಟ್ಟು)

**ಜಗಜೀವನ:**—ಈ 1900 ರೂಪಾಯಿಗಳ ಚೆಕ್ಕನ್ನು, ನೇಶನಲ್ ಬೇಂಕಿನಲ್ಲಿ ತೋರಿಸಿದಿರೆಂದರೆ ನಿಮಗೆ ಹಣವು ಸಿಗುವುದು.

**ಸ್ವಾಬ:**—(ಗಂಟುಮೂಟೆ ಕಟ್ಟುತ್ತಾ) ದೇವಿಯವರ ಅನುಗ್ರಹವು ಬಹಳವಾಯಿತು. ಬಡವನ ಮೇಲೆ ದಯೆ ಇರಲಿ. (ಇಬ್ಬರಿಗೂ ಸಲಾಂ ಮಾಡಿ ಹೋಗುವನು)

**ಜಗಜೀವನ:**—(ಮುಕ್ತೆಯ ಕೆನ್ನೆಯನ್ನು ಮೃದುವಾಗಿ ಚಿವುಟಿ) ಆಯಿತೋ ಮನಸ್ಸು ಸಮಾಧಾನ. ಗಿರಣಿಯ ಮುಷ್ಕರದ ಗಲಾಟೆಗಿಂತ ನಿನ್ನ ಕೋಪವೇ ನನಗೆ ಹೆಚ್ಚಿನ ಭಯವನ್ನುಂಟುಮಾಡುವುದು.

**ಮುಕ್ತಾ:**—(ಮುಗುಳು ನಕ್ಕು, ತನ್ನ ಪತಿಯನ್ನೊಮ್ಮೆ ನೋಡಿ) ಯಾರಲ್ಲಿ? (ಸೇವಕನು ಓಡಿ ಬರುವನು) ಕಾರನ್ನು ಸಿದ್ಧಪಡಿಸುವಂತೆ ಹೇಳು; ನನಗೆ ಮಹಿಳಾ ಕ್ಲಬ್ಬಿಗೆ ಹೋಗುವುದಿದೆ. (ಸೇವಕನು ಹೊರಟು ಹೋಗುವನು)

**ಜಗಜೀವನ:**—(ಮುಕ್ತೆಯನ್ನು ಸಮಿಪಕ್ಕೆ ಎಳೆದು) ಪ್ರಿಯೇ; ಇಂದೇಕೆ ಕ್ಲಬ್ಬಿನ ಯೋಚನೆ? ನಾನು ಶ್ರಮಪಟ್ಟು ಬಂದಿರುವೆನು. ಇಲ್ಲಿಯೆ ನಾವಿಬ್ಬರೂ ಸಾಯಂಕಾಲವನ್ನು ಕಳೆದರಾಗದೆ?

**ಮುಕ್ತಾ:**— ದಿನವೆಲ್ಲ ಮನೆಯಲ್ಲೇ ಕೂತು ನನಗೆ ಆಲಸ್ಯ ಹಿಡಿದು ಹೋಗಿದೆ; ಅಲ್ಲದೆ ಇಂದು ನೀವು ನನಗೆ ಕೊಟ್ಟ ಈ ಬಹುಮಾನವನ್ನು ನನ್ನ ಗೆಳತಿಯರಿಗೆ ತೋರಿಸಲಿಕ್ಕೇ ಬೇಕು.

**ಸೇವಕ:**—(ಪ್ರವೇಶಿಸಿ) ಕಾರು ಸಿದ್ಧವಾಗಿದೆ.

**ಮುಕ್ತಾ:**-ನಾನು ಹೋಗಿ ಬರುತ್ತೇನೆ. (ನಗುತ್ತಾ ಹೊರಟು ಹೋಗುವಳು. ಜಗಜೀವನನು ಅವಳನ್ನೇ ನೋಡುತ್ತಾ ನಿಲ್ಲುವನು. ಅಷ್ಟರಲ್ಲಿ ಮುಕ್ತೆಯ ಪ್ರೀತಿಯ ನಾಯಿಮರಿಯೊಂದರ ಕಾಲುನೋವನ್ನು ವಾಸಿಮಾಡಿದ ಡಾಕ್ಟರರ ಬಿಲ್ಲನ್ನು ಹಿಡಿದುಕೊಂಡು, ಅವರ ಪೇದೆಯೂ, ಅವನ ಹಿಂದೆ ಲಕ್ಷ್ಮಣನೂ, ಪ್ರವೇಶಿಸುವರು. ಪೇದೆಯು ಸಲಾಂ ಹೊಡೆದು ಬಿಲ್ಲನ್ನು ಮೇಜಿನ ಮೇಲೆ ಇಡುವನು. ಜಗಜೀವನನು ಅವನನ್ನೊಮ್ಮೆ ದಿಟ್ಟಿಸಿ ನೋಡಿ, ಬಿಲ್ಲು ತೆಗೆದುಕೊಂಡು ಓದಿ)

**ಜಗಜೀವನ:**—(ನಕ್ಕು) ಓಹೋ, ನಮ್ಮ ಮುಕ್ತೆಯ ನಾಯಿಮರಿಯ ಕಾಲುನೋವನ್ನು ವಾಸಿಮಾಡಿದುದಕ್ಕೆ ಡಾಕ್ಟರರಿಗೆ 150 ರೂಪಾಯಿಗಳು; ಆಗಲಿ. (ನೋಟು ಕೊಟ್ಟು ಕಳುಹಿಸುವನು. ಲಕ್ಷ್ಮಣನು ಅಲ್ಲೇ ನಿಲ್ಲುವನು. ಜಗಜೀವನನು ಆತನನ್ನು ನೋಡಿ) ನೀನು ಯಾರು? ಇಲ್ಲಿ ಯಾಕೆ ಬಂದೆ?

**ಲಕ್ಷ್ಮಣ:**—(ಕೈ ಮುಗಿದು) ಮಹಾಸ್ವಾಮಿ, ನಾನು ನಿಮ್ಮ ಗಿರಣಿಯಲ್ಲಿ ದುಡಿಯುವ ಒಬ್ಬ ಬಡ ಕೂಲಿಯಾಳು. ನನ್ನ ಪತ್ನಿಯು ಜ್ವರ ಪೀಡಿತಳಾಗಿ ಬಿದ್ದಿರುವಳು; ಅವಳಿಗೆ ಔಷಧಿ ತರಲು ನನ್ನಲ್ಲಿ ಒಂದು ಚಿಕ್ಕಾಸು ಕೂಡಾ ಇಲ್ಲ. ದಯವಿಟ್ಟು ಐದು ರೂಪಾಯಿಗಳನ್ನು ನನಗೆ ಕೊಟ್ಟು ಬಡವನನ್ನು ಉದ್ಧರಿಸಬೇಕು. (ಪುನಃ ವಂದಿಸುವನು.)

**ಜಗಜೀವನ:**— ನೀನು ಇಲ್ಲಿಗೆ ಏಕೆ ಬಂದೆ? ಮೆನೆಜರನ ಕೂಡೆ ಯಾಕೆ ಕೇಳಲಿಲ್ಲ?

**ಲಕ್ಷ್ಮಣ:**— ಮಹಾಸ್ವಾಮಿ, ಕೇಳಲು ಹೋದುದರಿಂದ ಈ ಅವಸ್ಥೆಯಾಯಿತು. (ಅಂಗಿ ಮೇಲೆ ಮಾಡಿ ಬೆನ್ನಿನ ಗಾಯದ ಬರೆಗಳನ್ನು ತೋರಿಸುವನು.)

**ಜಗಜೀವನ:**—ಹೋಗು, ಹೋಗು; ನನ್ನಿಂದ ಏನೂ ಸಿಗುವ ಹಾಗಿಲ್ಲ. ನಿಮಗೆ ಸಂಬಳವಂತೂ ಸಿಗುತ್ತದೆ; ಮೇಲೆ ಕೇಳಿದಷ್ಟು ಹಣ ಕೊಡಲು ಇಲ್ಲಿ ಬೇಂಕು ಇಡಲಿಲ್ಲ.

**ಲಕ್ಷ್ಮಣ:**—ನನ್ನ ತಿಂಗಳ ಸಂಬಳದಿಂದಾದರೂ ಕೊಡಿ ಸ್ವಾಮಿ.

**ಜಗಜೀವನ:**—ಎಲೋ ಹೋಗುವಿಯೊ ಇಲ್ಲವೊ?

**ಲಕ್ಷ್ಮಣ:**—ಪುಣ್ಯಾತ್ಮರೇ ಬಡವನ ಮೇಲೆ ಇಷ್ಟು ನಿಷ್ಕರುಣೆಯೇ?

ಮಾಲಗುಂಜ್—ತ್ರಿತಾಲ

ಪರಮ ಧೂರ್ತ-ಕನಿಕರಾ ರಹಿತನಾ ।
ಧನದಾನವ ಲೀಲೆಯೂ ಕಠಿಣಕರ ॥
ಧನವಂತರಾಗಿ—ದೀನರ ಪೋಷಿಸಿ ।
ಜನತೆಯ ಶುಭವ-ಗಳಿಸುವುದೆ ಘನತೆಯು ॥

ನಿಮ್ಮ ನಾಯಿಯ ಕಾಲುನೋವು ವಾಸಿಮಾಡುವುದಕ್ಕಾಗಿ ೧೫೦ ರೂಪಾಯಿಗಳನ್ನು ಖರ್ಚು ಮಾಡಿದಿರಿ. ನಿಮ್ಮಂತೆ ಮನುಷ್ಯ ರಾಗಿರುವ ನಮ್ಮ ಕಷ್ಟ ಪರಿಹಾರ ಮಾಡಲಿಕ್ಕಾಗಿ ಐದು ರೂಪಾಯಿ ಕೊಡಲು ಹಿಂಜರಿಯುವಿರೇ? ನಿಮ್ಮ ಗಿರಣಿಯಲ್ಲಿ ದುಡಿಯುವ ನಾವು ನಿಮ್ಮ ನಾಯಿಗಿಂತಲೂ ಹೀನರೆ? (ತುಸು ಕ್ರೋಧಾವೇಶದಿಂದ) ನಮ್ಮ ನೆತ್ತರನ್ನು ಹೀರಿ, ನೀವು ಸುಖ ಅನುಭವಿಸುತ್ತಿರುವಿರಿ. ವಿಚಾರಿಸಿರಿ ರಾಯರೆ, ನಾವೂ ಮನುಷ್ಯರು; ನಮಗೂ ನಿಮ್ಮಂತೆ ಎಲ್ಲವೂ ಬೇಕಾಗಿವೆ. ಆದರೆ, ಅಂಥಾ ಹಕ್ಕೆಲ್ಲವನ್ನೂ ನೀವೇ ಸೆಳೆದುಕೊಂಡು, ನಮ್ಮನ್ನು ಜೀವನ್ಮೃತರನ್ನಾಗಿ ಮಾಡಿ, ಮೃಗಗಳಂತೆ ದುಡಿಸುತ್ತಿರುವಿರಿ.

**ಜಗಜೀವನ:**—(ಕೋಪದಿಂದ) ಸಿಪಾಯಿ, (ಸಿಪಾಯಿ ಓಡಿ ಬರುವನು) ಈ ಗುಲಾಮನನ್ನು ಹೊರಗೆ ಹಾಕು. ನರಿಯು ಸಿಂಹವನ್ನು ಗದರಿಸುತ್ತಿರುವುದು. ಏನು ಧಿಮಾಕು ಈ ಕೂಲೀಮಕ್ಕಳದ್ದು. (ಸಿಪಾಯಿಯು ಲಕ್ಷ್ಮಣನನ್ನು ಹೊರದೂಡುವನು. ಜಗಜೀವನನು ಸಿಗರೇಟೊಂದನ್ನುರಿಸಿ ಸೇದುತ್ತಾ ಕುಳಿತುಕೊಳ್ಳುವನು.



# ದ್ವಿತೀಯಾಂಕ.

## ೧. ಲಕ್ಷ್ಮಣನ ಗುಡಿಸಲು.

(ಕಮಲೆಯು ಕೋಣೆಯ ಮಧ್ಯದಲ್ಲಿ ಕುಳಿತಿರುವಳು; ಕಿರಿಯ ಮಗನಾದ ಮುತ್ತನು ತಾಯಿಯ ಬಳಿ ಕುಳಿತಿರುವನು. ವಿನಯನು ಒಂದು ಮೂಲೆಯಲ್ಲಿ ಮೊಣಕಾಲಿನ ಮೇಲೆ ಗಲ್ಲವನ್ನಿಟ್ಟು ಕುಳಿತಿರುವನು; ಲಕ್ಷ್ಮಣನು ಗೂಢ ಚಿಂತೆಯಲ್ಲಿದ್ದು ನಿಧಾನವಾಗಿ ಅತ್ತ ಇತ್ತ ತಿರುಗುತ್ತಿರುವನು. ಎಲ್ಲರೂ ಮೌನ, ಉಪವಾಸದ ಹೊಟ್ಟೆಯುರಿ)

**ಕಮಲೆ:**—(ಮೌನವನ್ನು ಬಿಟ್ಟು) ಚಿಂತಿಸಿ ಉಪಯೋಗವೇನು? ಆದದ್ದಾಗಲಿ. ಎಂಥಾ ಕಷ್ಟ ಬಂದರೂ ಅನುಭವಿಸಿಯೇ ತೀರಬೇಕು. ಕಷ್ಟ ಬಂತೆಂದು ಕಣ್ಣೀರು ಸುರಿಸಿ ಫಲವಿಲ್ಲ. ಕಷ್ಟಗಳು ಬರುತ್ತವೆ; ಹೋಗುತ್ತವೆ. ಸುಖ ದುಃಖಗಳನ್ನು ಸಮಭಾವದಿಂದ ಅನುಭವಿಸುವವನೇ ಲೋಕದಲ್ಲಿ ಸುಖಿಯು.

**ಲಕ್ಷ್ಮಣ:**—(ಸ್ವಲ್ಪ ಹೊತ್ತು ನಿಂತು ಕಮಲೆಯನ್ನುದ್ದೇಶಿಸಿ) ಕಮಲೆ, ನೀನು ಹೇಳುವುದು ನಿಜ; ಆದರೆ ಸಂಸಾರದ ಪೋಷಣೆಯ ಭಾರವು ನನ್ನ ಮೇಲೆ ಇರದೆ, ನಿನ್ನ ಮೇಲಿರುತ್ತಿದ್ದರೆ ಮಡದಿ ಮಕ್ಕಳ ಪೋಷಣೆಯ ಸಮಸ್ಯೆಯು ಎಂಥಾ ದುಃಖಾಗ್ನಿಯನ್ನು ಹೃದಯದೊಳಗೆ ಉಂಟುಮಾಡುತ್ತಿದೆಯೆಂಬುದನ್ನು ತಿಳಕೊಳ್ಳುತಿದ್ದಿ. ಕಳೆದ ತಿಂಗಳಲ್ಲಿ ನಿನ್ನ ಔಷಧಿಗಾಗಿ ಸಾಲ ತೆಗೆದುಕೊಂಡದ್ದನ್ನು ಇನ್ನೂ ಪಾವತಿ ಮಾಡಿಲ್ಲ; ಮೆನೆಜರನಾದರೋ ಈ ತಿಂಗಳ ಸಂಬಳವನ್ನೂ ಕೊಡದೆ ಹೆಚ್ಚಿನ ಸಂಕಟದಲ್ಲಿ ಒಡ್ಡಿರುವನು. ನಾನಂತೂ ಮೆನೆಜರನ ಕೂಡೆ ಮಾತಾಡುವ ಹಾಗಿಲ್ಲ. ಅವನು ನನ್ನ ಹೆಸರೆತ್ತಿದರೆ ವಿಷಕಾರುತ್ತಿರುವನು; ನನ್ನನ್ನು ಕೆಲಸದಿಂದ ತೆಗೆದುಹಾಕದಿರುವುದೇ ನನ್ನ ಪುಣ್ಯವೆನ್ನಬೇಕು. ನಾಳೆಯಿಂದ ನಮ್ಮ ಊಟದ ಗತಿಯೇನೆಂಬುದನ್ನು ನಾನು ಆಲೋಚನೆ ಮಾಡುತ್ತಿರುವೆನು. ಕೈಯಲ್ಲಿ ಒಂದು ಚಿಕ್ಕಾಸೂ ಕೂಡ ಇಲ್ಲ. ಸಾಲ ಯಾರೂ ಕೊಡುವಂತಿಲ್ಲ; ನಾಳೆಗೆ ಅಕ್ಕಿ ಎಲ್ಲಿಂದ ತರಲಿ?

**ವಿನಯ:**—(ಮೆಲ್ಲನೆ ಬಂದು ತಂದೆಯನ್ನು ಅಪ್ಪಿ) ಅಪ್ಪಾ, ನಿಮಗೆ ಮುತ್ತುವೊಬ್ಬನಿದ್ದರೆ ಸಾಕು. ನನ್ನನ್ನು ಯಾರಿಗಾದರೂ ಮಕ್ಕಳಿಲ್ಲದವ ರಿಗೆ ಮಾರಿ ಬಿಡಿರಿ. ಅಂದರೆ ಕೆಲವು ದಿನವಾದರೂ,ನೀವೂ ಅಮ್ಮನೂ ನೆಮ್ಮದಿಯಲ್ಲಿರಬಹುದಲ್ಲವೆ?

**ಲಕ್ಷ್ಮಣ:**—(ವಿನಯನನ್ನು ತಬ್ಬಿ ಕಣ್ಣೀರಿಡುತ್ತಾ) ಹಾ ವಿನಯಾ!

**ಜೋಗಿಯಾ—ಜಪತಾಳ**

ಭಾಗ್ಯ ಹೀನರು ನಾವು । ಬಡತನವ ಪೊಂದಿದೆವು ।
ಭಾಗ್ಯ ದೇವತೆಯಾದ । ನಿನ್ನನಗಲಿವು ಮಗುವೆ ॥
ದೀನತನದುರಿಯಲ್ಲಿ । ಪ್ರಾಣ ಹೋದರು ಸರಿಯೆ ।
ನಿನ್ನ ಪರರಿಗೆ ಮಾರಿ । ನಾ ಜೀವಿಸೆನು ಮಗುವೆ ॥
ನೀನೆ ಎನಗೈಶ್ವರ್ಯ । ನಿನ್ನಿರವೆ ಸೌಭಾಗ್ಯ ।
ನಿನ್ನನಾನಗಲಿ ಬದು । ಕಿರಲಾರೆ ಮಗುವೆ ॥

ಮಗೂ, ಅಯ್ಯೋ ನಿನ್ನ ಆ ಕೋಮಲ ಹೃದಯಕ್ಕೂ ಬಡತನದ ದುಃಖವು ತಟ್ಟಿತೇ! ಇಲ್ಲ ಮಗೂ, ನನ್ನ ಹೃದಯ ರಕ್ತವನ್ನೂ ಕೊಟ್ಟಾ ದರೂ, ನಿನ್ನನ್ನು ರಕ್ಷಿಸುವೆನು ಹೊರತು, ನಿನ್ನನ್ನು ಎಂದಿಗೂ ಪರರ ಪಾಲು ಮಾಡಲಾರೆನು (ಮುತ್ತಿಡುವನು)

**ಕಮಲ:**—(ಏನೋ ಹೊಳೆದಂತಾಗಿ) ನಮಗೆ ಅಗತ್ಯವಿಲ್ಲದ ಪಾತ್ರೆ ಗಳನ್ನು ಮಾರಿ ಕೆಲವು ದಿನ ಚಿಂತೆಯಿಲ್ಲದೆ ದೂಡಬಹುದಲ್ಲವೆ?

**ಲಕ್ಷ್ಮಣ:**—(ನಕ್ಕು) ಏನು, ಪಾತ್ರೆಗಳನ್ನು ಮಾರುವುದೆ? (ಮೌನ ವಾಗಿದ್ದು) ಪಾಪಿ ಲಕ್ಷ್ಮಣಾ, ಕಡೆಗೆ ಮನೆಯಲ್ಲಿರುವ ಪಾತ್ರೆಗಳನ್ನು ಮಾರಿ ತಿನ್ನುವ ಕಾಲವೂ ನಿನಗೆ ಬಂದಿತೆ? ಹೌದು, ಸದ್ಯಕ್ಕೆ ಇದರ ಹೊರತು ಬೇರೆ ಉಪಾಯವಿಲ್ಲ. (ಎರಡು ಮೂರು ಪಾತ್ರೆಗಳನ್ನು ಎತ್ತಿ ಹಿಡಿದು ನಕ್ಕು) ಇವುಗಳನ್ನು ಮಾರಿ ನಾವು ಎಷ್ಟು ದಿವಸ ಕಳೆಯ ಬಲ್ಲೆವು. ಆಗಲಿ, ಕಮಲೆ, ಮಕ್ಕಳನ್ನು ಸಂತವಿಸು. ನಾನೀಗಲೇ ಪೇಟೆ ಕಡೆಗೆ ಹೋಗಿ ಇವುಗಳನ್ನು ಮಾರಿ ಬರುತ್ತೇನೆ. (ತೆರೆಗೆ ನೋಡಿ ಹೆದರುತ್ತಾ ಹಿಂದೆ ಸರಿದು) ಹಾ! ಮನೆಯ ಯಜಮಾನನು ಬಾಡಿಗೆ ವಸೂಲಿಗೆ ಬಂದೇ ಬಿಟ್ಟನು. ಅಯ್ಯೋ, ಈಗ ಏನು ಮಾಡಲಿ. ಎಡು ಸಲ ಸಂಬಳ



ಲಕ್ಷ್ಮಣ:— ಮಗೂ, ಅಯ್ಯೋ, ನಿನ್ನ ಆ ಕೋಮಲ ಹೃದಯಕ್ಕೂ
ಬಡತನದ ದುಃಖವು ತಟ್ಟಿತೇ.

ಸಿಗಲಿಲ್ಲವೆಂದು ಹಿಂದೆ ಕಳುಹಿಸಿದ್ದೆನು. ಈಗಂತೂ ಈತನು ಹಿಂದಿರುಗಿ ಹೋಗುವಂತಿಲ್ಲ. ಏನು ಮಾಡಲಿ. (ಮುದುಕನೊಬ್ಬನು ಪ್ರವೇಶಿಸುವನು.) ಬನ್ನಿ ಧನಿಗಳೇ, ಕುಳಿತುಕೊಳ್ಳಿರಿ. ಬಡವರ ಮನೆ; ಬೆಂಚು ಕುರ್ಚಿ ಕೊಡಲಿಲ್ಲವೆಂದು ಕೋಪಿಸಬಾರದು.

**ಯಜಮಾನ:**—ಚಿಂತಿಲ್ಲ, ಚಿಂತಿಲ್ಲ; (ತನ್ನ ಊರುಗೋಲನ್ನು ಕೆಳಗಿಟ್ಟು ತಾನೂ ಕೂತುಕೊಂಡು) ಲಕ್ಷ್ಮಣಾ ಏನು? ಎರಡು ಸಲ ಹಿಂದೆ ಕಳುಹಿಸಿರುವಿ. ಈಗಂತೂ ನಾನು ಹಣ ಸಿಗದೆ ಹೋಗುವಂತಿಲ್ಲ. ಒಂದೋ, ಎರಡು ತಿಂಗಳ ಬಾಡಿಗೆ ಕೊಡಬೇಕು; ಇಲ್ಲವೇ ಗಂಟು ಮೂಟೆ ಕಟ್ಟಿ ಮನೆಬಿಟ್ಟು ಹೊರಡಬೇಕು. (ವೀಳ್ಯ ಜಗಿಯಲು ಪ್ರಾರಂಭಿಸುವನು. ಕಮಲೆಯು ಲಕ್ಷ್ಮಣನ ಮೋರೆ ನೋಡಿ ಮರುಗುವಳು. ಲಕ್ಷ್ಮಣನು ಕಮಲೆಯನ್ನು ನೋಡಿ ಚಿಂತಿಸುವನು.) ಏನು ಲಕ್ಷ್ಮಣಾ, ಮಾತಾಡುವುದಿಲ್ಲ? ಈ ಸಲವೂ ಹಿಂದೆ ಕಳುಹಿಸುವ ಉಪಾಯ ಹುಡುಕುತ್ತಿರುವೆಯಾ? ಕೊಡು, ಕೊಡು ಬೇಗ; ಮತ್ತು ನೀನೆಷ್ಟು ನಿಲ್ಲೆಂದರೂ ನಿಲ್ಲುವುದಿಲ್ಲ. ಹೋಗಿಯೇ ಬಿಡುತ್ತೇನೆ.

**ಲಕ್ಷ್ಮಣ:**—(ಕೈ ಮುಗಿದು) ಇಲ್ಲ ಧನಿಗಳೇ, ನಿಮ್ಮ ಹಣವನ್ನು ನಾನು ತಿಂದು ಹಾಕುವಂಥವನಲ್ಲ; ನಿಮ್ಮ ಬಾಡಿಗೆಯನ್ನು ಕೊಟ್ಟೇ ಕೊಡುತ್ತೇನೆ; ಆದರೆ ಈಗ ಸ್ವಲ್ಪ ಕಷ್ಟಕಾಲ.

**ಯಜಮಾನ:**—ಹೌದು, ಹೌದು; ನನಗೆ ಗೊತ್ತು ನೀನಂಥಾ ಮನುಷ್ಯನಲ್ಲವೆಂತ. ಆದರೆ ಕಷ್ಟಕಾಲವನ್ನು ನಂಬಬಾರದು ನೋಡು. ಎಂತಹ ಒಳ್ಳೇ ಮನುಷ್ಯರೂ, ಕಷ್ಟಕಾಲದಲ್ಲಿ ಠಕ್ಕರಾಗುತ್ತಾರೆ; ಅಲ್ಲವೆ ಕಮಲಮ್ಮಾ. (ಬೇರೆ ವಿಷಯವೆತ್ತಿ) ಹಾಂ, ಕಮಲಮ್ಮಾ, ನಿನ್ನ ಜ್ವರ ಹೇಗಿದೆ? ಪಾಪ ಬರಬಾರದು, ನಿಮ್ಮಂಥಾ ಬಡವರಿಗೆ ಇಷ್ಟು ಕಷ್ಟ ಬರಬಾರದು. ನನಗೆ ಬಹಳ ದುಃಖವಾಗುತ್ತದೆ. ನಿಮ್ಮ ಸ್ಥಿತಿಯನ್ನು ನೋಡುವಾಗ ನನ್ನ ಎದೆಯೊಡೆಯುತ್ತದೆ. ಕಮಲಾಬಾಯಿ, ಮಧ್ಯಾಹ್ನದ ಊಟ ಆಗಿದೆಯೊ? ಪಾಪ ಉಪವಾಸ ಬೀಳುವುದನ್ನು ನನ್ನಿಂದ ನೋಡಲಿಕ್ಕಾಗುವುದಿಲ್ಲ. ಆ ರಾಯರು ಹೀಗೆ ಮಾಡಬಾರದು. ಬಹಳ ದುಃಖದ ಸಂಗತಿ.

(ಲಕ್ಷ್ಮಣನಿಗೆ) ಏನು ಲಕ್ಷ್ಮಣಾ? ನನಗೆ ತಡವಾಗುತ್ತಿರುವುದು. ಬೇಗ ಕೊಡು; ನಾನು ಹೋಗಿ ಬಿಡುತ್ತೇನೆ. (ರಶೀದಿ ಪುಸ್ತಕ ತೆಗೆದು) ಎರಡು ತಿಂಗಳ ಬಾಡಿಗೆ, ಒಟ್ಟು ಆರು ರೂಪಾಯಿಗಳು. ರಶೀದಿ ಕೂಡ ಬರೆದು ತಂದಿರುತ್ತೇನೆ. ಬೇಗ ಕೊಡು; ನಿಮ್ಮ ಕಷ್ಟ ನೋಡಲು ನನಗಾಗುವು ದಿಲ್ಲ. ನಾನು ಗಿರಣಿಯ ಧನಿಯಾಗುತ್ತಿದ್ದರೆ, ಎರಡೆರಡು ತಿಂಗಳ ಸಂಬಳ ಹೆಚ್ಚು ಕೊಡುತ್ತಿದ್ದೆ.

**ಲಕ್ಷ್ಮಣ:**—(ದುಃಖಿಸುತ್ತಾ) ಸ್ವಾಮಿ, ನನ್ನಲ್ಲಿ ಈಗ ಒಂದು ಚಿಕ್ಕಾಸೂ ಕೂಡಾ ಇಲ್ಲ. ಹೇಳಲು ದುಃಖವಾಗುವುದು.

**ಯಜಮಾನ:**—(ಕಣ್ಣು ಕೆರಳಿಸಿ, ಸಿಡುಕಿನಿಂದ) ಹೂಂ-ಏನು? ಚಿಕ್ಕಾಸು ಕೂಡಾ ಕೊಡಲಿಕ್ಕಿಲ್ಲವೆಂದು ಹೇಳಲು ದುಃಖವಾಗುವುದೆ? ಹಾಗಾದರೆ ನನಗೂ ಕೂಡಾ, ನಿಮ್ಮನ್ನು ಮನೆಯ ಹೊರಗೆ ಹಾಕಿ, ಬೀಗ ಹಾಕುತ್ತೇನೆಂದು ಹೇಳಲು ದುಃಖವಾಗುವುದು.

**ಲಕ್ಷ್ಮಣ:**—ಸ್ವಾಮಿ, ನೀವು ಸ್ವಲ್ಪ ಸಮಾಧಾನ ಮಾಡಿಕೊಳ್ಳಿರಿ; ನಿಮ್ಮ ಕಾಲು ಹಿಡಿಯುತ್ತೇನೆ. ಬಡವರನ್ನು ಈ ರೀತಿ ಗೋಳಾಡಿಸ ಬೇಡಿರಿ. ಇನ್ನು ಹತ್ತು ದಿವಸದ ಅವಧಿ ಕೊಡಿರಿ; ಅಂದರೆ ಎಲ್ಲಾ ಸಾಲವನ್ನೂ ಸಲ್ಲಿಸುವೆನು.

**ಯಜಮಾನ:**—(ಎದ್ದು ನಿಂತು) ಏನಯ್ಯಾ ಇದು? ಹೀಗೆಲ್ಲಾ ದಿನದಿನ ನಿನ್ನ ಮನೆಗೆ ಬರಲು ನಾವೇನು ಬೇಡಲಿಕ್ಕೆ ಬರುವ ಭಿಕ್ಷುಕರೆ? ಅಥವಾ ಚಾಕರಿ ಜನಗಳೇ?ಎಷ್ಟು ಸಲ ಬಂದು ಹೋಗುವುದು? ನನಗೆ ನಿನ್ನ ಬಡತನ ಗೊತ್ತಿಲ್ಲ. ನೀನಲ್ಲದಿದ್ದರೆ ಬೇರೆಯವರು ತಿಂಗಳಿಗೆ ನಾಲ್ಕು ರೂಪಾಯಿ ಕೊಟ್ಟಾದರೂ ಈ ಮನೆಯಲ್ಲಿ ನಿಲ್ಲುವವರಿದ್ದಾರೆ. ಅಲ್ಲ; ಪಾಪ, ಇರಲಿ, ಬಡವನಲ್ಲವೇ ಎಂದು ಒಂದು ರೂಪಾಯಿ ಕಡಿಮೆ ಮಾಡಿಯೇ ಕೊಟ್ಟಿರುವೆನು. ಅದರ ಮೇಲೆ ಈ ಮಾತು. ಎಷ್ಟಾ ಯಿತು? ಒಂದು ರೂಪಾಯಿ ಅಂದರೆ ಒಂದು ವರ್ಷಕ್ಕೆ ಹನ್ನೆರಡು ನಷ್ಟ ನನಗೆ. ಹತ್ತು ವರ್ಷಕ್ಕೆ ನೂರಿಪ್ಪತ್ತು ಹೋಯ್ತಲ್ಲಾ. ಐವತ್ತು ವರ್ಷಕ್ಕೆ ಆರ್ನೂರು ರೂಪಾಯಿಗಳು. ಆರುನೂರು ಎಂದರೆ ಏನಯ್ಯಾ? ನಿನ್ನಿಂದಾಗಿ ನನಗೆ ಇಷ್ಟು ನಷ್ಟ.

**ಲಕ್ಷ್ಮಣ**:—(ಧನಲೋಭದ ಈ ತರದ ದೀರ್ಘಾಲೋಚನೆಯನ್ನು ಕಂಡು ಕಿರು ನಗುವನು.)

**ಯಜಮಾನ**:—ಏನಯ್ಯಾ ನಗುತ್ತಿ? ಹುಚ್ಚರು ಬಂದಿರುವರೆ?

**ಲಕ್ಷ್ಮಣ**:—ಅಲ್ಲ ಸ್ವಾಮಿ. ನನ್ನ ಬಡತನದ ಅವಸ್ಥೆಯನ್ನು ನೆನೆದು ನಗು ಬಂತು.

**ಯಜಮಾನ**:—ಅದೆಲ್ಲಾ ಇರಲಿ; ಈಗೇನು ಮಾಡುವೆ?

**ಲಕ್ಷ್ಮಣ**:—ಏನು ಮಾಡಲಿ ಸ್ವಾಮಿ? (**ಪಾತ್ರೆಗಳನ್ನು ತೋರಿಸಿ**) ನಮಗೆ ಕೂಳಿಗೆ ಗತಿಯಿಲ್ಲದೆ, ನೋಡಿ, ಈ ಪಾತ್ರೆಗಳನ್ನು ಮಾರಿಯಾದರೂ ಎರಡು ಮೂರು ದಿನಗಳನ್ನು ದೂಡಬೇಕೆಂದು ಎಣಿಸಿರುವೆವು.

**ಯಜಮಾನ**:—(ಉಪಾಯ ಒಂದು ಹೊಳೆದು, ತನ್ನ ಜಾಣ್ಮೆಗೆ ಕಿರುನಕ್ಕು) ಹೂಂ, ಇದನ್ನು ಸುಲಭವಾಗಿ ಹೊಡೆಯಬಹುದು. (**ಲಕ್ಷ್ಮಣನನ್ನು ಉದ್ದೇಶಿಸಿ**) ನೀನು ಇದನ್ನು ಪೇಟೆಯ ವರೆಗೆ ಕೊಂಡುಹೋಗುವ ಶ್ರಮ ಪಡುವುದು ಬೇಡ. ನಾನೇ ತೆಗೆದುಕೊಳ್ಳುತ್ತೇನೆ. ಹೇಳು, ಈ ಮೂರಕ್ಕೂ ಎಷ್ಟು ಖರೀದಿ?

**ಲಕ್ಷ್ಮಣ**:—(ಸಂತೋಷದಿಂದ ನಗುತ್ತಾ) ಅಯ್ಯೋ, ನನಗೆ ವ್ಯಾಪಾರ ಮಾಡಿಯೇ ಗೊತ್ತಿಲ್ಲವಲ್ಲ ಸ್ವಾಮಿ. ಇವು ಹಿತ್ತಾಳಿಯ ಪಾತ್ರೆಗಳು; ಮೂರಕ್ಕೆ ಆರು ರೂಪಾಯಿ ಆದರೂ ಕೊಡಬೇಕು.

**ಯಜಮಾನ**:—ಏನಯ್ಯಾ, ತಲೆತೆಗೆಯುವ ಆಲೋಚನೆಯೋ? ಹಿತ್ತಾಳಿಗೆ ಭಾರಿ ದರ ಇಳಿದಿದೆ. ಒಟ್ಟು ನಾಲ್ಕು ರೂಪಾಯಿಗಳಿಗೆ ಕೊಡುವಿಯಾದರೆ ಕೊಡು.

**ಲಕ್ಷ್ಮಣ**:—(ಸ್ವಲ್ಪ ಆಲೋಚಿಸಿ) ಹುಂ, ಆಗಲಿ ಸ್ವಾಮಿ; ಹೇಗೂ ನಮ್ಮ ಹೊಟ್ಟೆ ತುಂಬ ಬೇಕು.

**ಯಜಮಾನ**:—(ಕೈಲಿ ತೆಗೆದು) ಲಕ್ಷ್ಮಣಾ, ನಾಲ್ಕು ರೂಪಾಯಿಯಲ್ಲಿ ಮೂರುವರೆಯನ್ನು ಎರಡು ತಿಂಗಳ ಬಾಡಿಗೆಗೆ ವಜಾಮಾಡಿಕೊಂಡಿದ್ದೇನೆ. (**ಲಕ್ಷ್ಮಣನ ಮುಖವು ಒಮ್ಮೆಗೇ ಕಳೆಗುಂದುವುದು**) ಇಗೋ ರಶೀದಿ.

ಇನ್ನು ಬಾಕಿ ಎರಡುವರೆಯನ್ನು ಹತ್ತು ದಿವಸಗಳ ಒಳಗಾಗಿ ಕೊಡಬೇಕು. (ಶಾಸ್ತ್ರಿ ಹಿಡಕೊಂಡು ಎಂಟಾಣೆ ಪಾವಲಿಯೊಂದನ್ನು ಲಕ್ಷ್ಮಣನ ಕೈಯಲ್ಲಿ ಹಾಕಿ ಹೋಗುವನು. ಲಕ್ಷ್ಮಣನು ಅದನ್ನು ತುಸು ಹೊತ್ತು ನೋಡುತ್ತಾ ನಿಂತು ಆ ಮೇಲೆ ಅದನ್ನು ಧನಿ ಹೋದ ದಾರಿಗೆ ಎಸೆಯುವನು.)

ಭಾಗೇಸರಿ—ಜಪತಾಳ

**ಲಕ್ಷ್ಮಣ:—** ಪಿಶಾಚರಾಚರಿಪ ಘೋರಾಚರಣೆಯಿದು ಅಹ ||
ಅವಿಚಾರಪರರಾಗಿ—ಸುವಿಚಾರವನು ತ್ಯಜಿಸಿ ।
ಬರಿಯ-ಧನಲೋಭ । ಪರವಶರಾಗಿ ಪೀಡಿಸರೋ ||

---

## ೨. ವರ್ಗ.

(ಮೆನೆಜರ ಮಹೇಂದ್ರನೂ, ರಾವ್ ಬಹದ್ದೂರು ಜಗಜೀವನರಾಯನೂ, ಪ್ರವೇಶಿಸುವರು.)

**ಜಗಜೀವನ:—** ಮಹೇಂದ್ರ ಬಾಬೂ, ಬೆಂಗಳೂರಿನಿಂದ, ಕೂಡಲೇ ಬರಬೇಕಾಗಿ ತಂತಿ ಬಂದಿರುವುದು. ಆದ್ದರಿಂದ ನಾನು ಇಂದೇ ಹೊರಡುವೆನು. ನಾನು ಬರುವ ತನಕ ಗಿರಣಿಯ ಕೆಲಸವನ್ನು ಜಾಗರೂಕತೆಯಿಂದ ನಡಿಸಿರಿ. ಕೂಲಿಕಾರರಿಗೆ ಗೊಂದಲವೆಬ್ಬಿಸಲಿಕ್ಕೆ ಆಸ್ಪದ ಕೊಡಬೇಡಿರಿ. ಅವರ ಸಂಬಳವನ್ನು ವಾರವಾರಕ್ಕೆ ಕೊಡಿರಿ.

**ಮಹೇಂದ್ರ:—** ಅಷ್ಟರಿಂದ ತೃಪ್ತಿಹೊಂದುವುದಿಲ್ಲ ಸ್ವಾಮಿ ಅವರು. ಪ್ರತಿಯೊಬ್ಬ 'ಎಡ್ವಾನ್ಸ್' ಕೇಳುತ್ತಾರೆ. ಒಬ್ಬನ ಮಗುವಿಗೆ ಕಾಯಿಲೆ; ಇನ್ನೊಬ್ಬನ ಹೆಂಡತಿ ಬಾಣಂತಿ; ಮೂರನೆಯವನ ತಾಯಿ ತೀರಿಕೊಂಡಿರುವಳು; ಇದೇ ಹಾಡು. ಇವರಿಗೆಲ್ಲಾ 'ಎಡ್ವಾನ್ಸ್' ಕೊಟ್ಟು ಪೂರೈಸುವುದೇ, ಸ್ವಾಮಿ? ಅದೂ ಅಲ್ಲದೆ, ಈಗೀಗ ಲಾಭ ಬಹಳವಾಗುತ್ತಿದೆ ಎಂಬ ಸುದ್ದಿ ಯಾರೊ ಹರಡಿಸಿ ಬಿಟ್ಟಿದ್ದಾರೆ ಕೂಲಿಕಾರರಲ್ಲಿ. ಆದುದರಿಂದ ಎರಡು ವರ್ಷಗಳ ಮೊದಲು ಕಡಿಮೆ ಮಾಡಿದ್ದ ಸಂಬಳವನ್ನು ಪುನಃ ಏರಿಸಬೇಕೆಂದು ಅವರು ಒಮ್ಮತದಿಂದ ಕೇಳುವವರಿದ್ದಾರಂತೆ.

**ಜಗಜೀವನ:**—(ಸಿಡುಕಿನಿಂದ) ಸಂಬಳ ಏರಿಸಬೇಕು, ಕತ್ತೇ ಮಕ್ಕಳಿಗೆ. ಇನ್ನಷ್ಟು ಕಡಿಮೆ ಮಾಡಬೇಕು ಇವರಿಗೆ. ನಮ್ಮ ಲಾಭದ ಸಂಗತಿ ಇವರಿಗೇಕೆ? ಏರಿಸದಿದ್ದರೆ ಏನು ಮಾಡುವರಂತೆ?

**ಮಹೇಂದ್ರ:**—ಮುಷ್ಕರ ಹಿಡಿಯುವರಂತೆ.

**ಜಗಜೀವನ:**—ಮುಷ್ಕರ! ಮುಷ್ಕರ ಅಂದರೆ ಸೆರೆ ಕುಡಿದ ಹಾಗೆಂದು ಎಣಿಸಿದ್ದಾರೆ ತೋರುತ್ತದೆ. ಇದೆಲ್ಲಾ ಆ ಲಕ್ಷ್ಮಣ ಸುದರ್ಶನ, ಇವರ ಪಿಕಲಾಟವಿರಬೇಕು. ಸ್ವಲ್ಪ ವಿದ್ಯೆ ಕಲಿತವರೆಂದು ಹೆಮ್ಮೆ ಅಡರಿದೆ ತಲೆಗೆ; ಮಾಡಲಿ ಮುಷ್ಕರ. ಬೆಂಗಳೂರಿನಲ್ಲಿ ಮಾಡಿದಂತೆ, ಕೂಲಿಯವರೆಲ್ಲರೂ ಕಾಲಿಗೆ ಬೀಳುವಂತೆ ಮಾಡದಿದ್ದರೆ ನಾವೇಕೆ? ಲಾಭ ಹೆಚ್ಚಾದಂತೆ ಸಂಬಳ ಏರಿಸುವ ತತ್ವವನ್ನು ಸರ್ವಥಾ ಮಾನ್ಯಮಾಡಲು ಸಾಧ್ಯವಿಲ್ಲ. ಆದರೆ ನಿಷ್ಕಾರಣ ಅವರಿಗೆ ಕಷ್ಟ ಕೊಡಬೇಡಿರಿ; ಕೊಡುವ ಕೂಲಿ ಸರಿಯಾಗಿ ಕೊಡಿರಿ, ತಿಳಿಯಿತೆ. ಇಲ್ಲದಿದ್ದರೆ, ನಾವು ದಿನಗೂಲಿಯನ್ನೂ ಸರಿಯಾಗಿ ಕೊಡುವುದಿಲ್ಲವೆಂದು ಬೊಬ್ಬೆಯಾದರೆ ನಮಗೇನೇ ನಷ್ಟವಾದೀತು. ನಮ್ಮ ವ್ಯಾಪಾರಿಗಳು ಜನರು ಈಗ ವಿಶೇಷವಾಗಿ ಕೊಂಡುಕೊಳ್ಳುತ್ತಾರೆ. ಅವರ ಮನಸ್ಸು ಹಾಳು ಮಾಡಬಾರದು. (ಕೈಗಡಿಯಾರ ನೋಡಿ) ಗಾಡಿಗೆ ಹೊತ್ತಾಯಿತು. ನಾನು ಹೋಗುವೆನು. ಹೇಳಿದ್ದೆಲ್ಲಾ ನೆನಪಿರಲಿ. (ಹೋಗುವನು.)

**ಮಹೇಂದ್ರ:**—(ನಕ್ಕು) ಜನರ ಮನಸ್ಸು ಹಾಳುಮಾಡಬಾರದಂತೆ. ಏನು ಅವರನ್ನು ತಲೆಯ ಮೇಲಿಟ್ಟು ಪೂಜಿಸಬೇಕೊ! ಈ ರಾಯರಿಗೆ ನಷ್ಟ ಸಂಭವಿಸಿದರೆ ನನಗೇನು? ನಾನು ಯಾರಿಗೂ ಬಗ್ಗ ಬೇಕಾದುದಿಲ್ಲ. ಕೂಲಿಕಾರರು ವಿರೋಧಿಸಿದರೆ ಬಲಾತ್ಕಾರದಿಂದ ಅವರ ಸೊಕ್ಕನ್ನು ಅಣಗಿಸಿ ಬಿಡುವೆನು. (ಆಲೋಚಿಸಿ) ಇರಲಿ, ಈಗ ಸದ್ಯಕ್ಕೆ ಖರ್ಚಿಗೆ ಏನು ಮಾಡಲಿ. ಹೊಸ ಕಾರಿಗೆ 'ಓರ್ಡರು' ಕೊಟ್ಟಿರುವೆನು. ಇಂದೋ ನಾಳೆಯೋ ಅದು ಬರಬಹುದು. ಹಣಕ್ಕೇನು ಮಾಡಲಿ? (ಉಪಾಯ

ತಲೆದೋರಿದಂತಾಗಿ) ರಾಯರ ಹೆಸರು ಫೋರ್ಜರಿ ಮಾಡಿ, ಬೇಂಕಿನಲ್ಲಿ ಹಣ ತೆಗೆಯುದ ವಿನಹ ಗತ್ಯಂತರವಿಲ್ಲ. (ತುಸು ಮೌನವಾಗಿದ್ದು) ಹೌದು, ಹಾಗೇ ಮಾಡುವೆನು. (ಸಿಗರೇಟು ಉರಿಸಿ ಸೇದುತ್ತಾ ಹೋಗುವನು.)

---

## ೩. ಲಕ್ಷ್ಮಣನ ಗುಡಿಸಲು.

(ರಾತ್ರಿ: ನಿದ್ರಾಂಗನೆಯು ಕಮಲೆ, ಮುತ್ತು, ವಿನಯರ ಮೇಲೆ ಕನಿಕರಪಟ್ಟು ಅವರ ಹಸಿವಿನ ಬೇಗೆಯನ್ನು ತನ್ನ ಆಲಿಂಗನದಿಂದ ಮರೆಸಿರುವಳು. ಲಕ್ಷ್ಮಣನು ಮಾತ್ರ ವಿಚಾರಮಗ್ನನಾಗಿ ಅತ್ತಿತ್ತ ಕೋಣೆಯಲ್ಲಿ ತಿರುಗುತ್ತಿರುವನು; ಮಲಗುವನು; ನಿದ್ದೆ ಹತ್ತದೆ ಪುನಃ ಎದ್ದು ತಿರುಗುವನು. ರಾತ್ರೆಯ ಗಾಡಾಂಧಕಾರವು ಅವನ ಹೃದಯದ ಕಗ್ಗತ್ತಲೆಯನ್ನು ಇನ್ನೂ ಹೆಚ್ಚಿಸಿರುವುದು. ನಿರಾಶೆಯ ಪರಮಾವಧಿಯಲ್ಲಿ ಸಿಥಾರವು ಕಠಿಣವಾಗಿರುವುದು. ವಿಚಾರತರಂಗಗಳು ಒಂದೇ ಸವನೆ ಹೃದಯದಲ್ಲಿ ಸಾಗುತ್ತಿರುವುವು.)

**ಲಕ್ಷ್ಮಣ:**—ಹಾಯ್, ನಿದ್ದೆ ಹತ್ತಲೊಲ್ಲದು. ಈ ಬಡತನದ ಸ್ಮರಣೆಯಿಂದಾಗಿ ನಿದ್ದೆಯೇ ಹತ್ತಲೊಲ್ಲದು. (ತುಸು ತೀಕ್ಷ್ಣತೆಯಿಂದ) ಬಡವರನ್ನು ಈ ರೀತಿ ದಣಿಸುವ ಈ ಸಿರಿವಂತರ ಅತ್ಯಾಚಾರಗಳನ್ನು ನೆನಸಿದೊಡನೆ ನನ್ನಲ್ಲಿದ್ದ ಶಾಂತತೆಯು ಮಾಯವಾಗಿ ಕ್ರೋಧವು ಉದ್ರೇಕವಾಗುವುದು. ಅಯ್ಯೋ, ನಾವು ಇವರಿಗಾಗಿ ನಮ್ಮ ಬೆವರ ಧಾರೆಯನ್ನು ಸುರಿಸುತ್ತೇವೆ. ಆದರೆ, ನಾವು ಉಪವಾಸದಿಂದ ನರಳುತ್ತಿದ್ದೇವೆ; ಅವರು ಸುಖಭೋಜನವನ್ನು ಮಾಡಿ ಮೈ ಮೆರೆತಿದ್ದಾರೆ. ಬಡವರ ಹಣವನ್ನು ಕಿತ್ತುಕೊಂಡು, ಬಡವರಿಗೆ ಸಹಾಯಮಾಡದಿರುವ ಧನಿಕರ ಬಳಿ, ಅಷ್ಟು ಹಣವನ್ನು ಇರಗೊಡಿಸಬಾರದು. ಆ ಹಣವು ಬಡವರಿಗೆ ಸಿಗಲೇಬೇಕು. ಬಡವರ ರಕ್ತಹೀರುವ ಧನಪಿಶಾಚಿಗಳನ್ನು ಇರಗೊಡಿಸಲೇ ಬಾರದು; ಅವರು ಸಾಯಲೇಬೇಕು. ಹೌದು, ಕೂಲಿಕಾರರನ್ನು ಈರೀತಿ ಪೀಡಿಸುವ ಆ ನಮ್ಮ ಧನಿಯೂ ಕೂಡಾ ಸಾಯಲೇಬೇಕು. (ಮೌನ) ಏನು! ದುಃಖದಿಂದ ಬೆಂದ ನನ್ನ ಹೃದಯದಲ್ಲಿ ವಿಪರೀತ ಪರಿವರ್ತನೆಯು ಆಗುತ್ತಲಿರುವುದು. ಅದೋ, ರಾಯರ ಕೊಲೆಮಾಡುವಂತೆ ನನ್ನ ಅಂತರಾತ್ಮವು ಪ್ರೇರೇಪಿಸುತ್ತಿರುವುದು.

(ಮೌನ) ಇಲ್ಲ, ಇಲ್ಲ; ಸಾಧ್ಯವಿಲ್ಲ. ಕೊಲೆಯಂಥಾ ಭಯಂಕರ ಪಾಪವನ್ನು ಮಾಡಲು ಈ ಲಕ್ಷ್ಮಣನು ಮುಂದರಿಯಲಾರನು. ಎಲ್ಲವನ್ನೂ ಶಾಂತಿಯಿಂದ ಸಹಿಸಿಕೊಳ್ಳಬೇಕು. ಎಲ್ಲರಿಗೂ ಶಾಂತಿಯ ಬೋಧನೆಯನ್ನು ಕೊಡುತ್ತಿರುವ ನಾನೇಕೆ ಹಿಂಸೆಯ ಭೀಷಣ ವಿಚಾರಕ್ಕೆ ಮನ ಒಡ್ಡಲಿ? (ಹೋಗಿ ಮಲಗಿಕೊಳ್ಳುವನು. ಆದರೆ ಮನಸ್ವಾಸ್ಥ್ಯವಿಲ್ಲದೆ ಮನವು ಪುನಃ ಉದ್ರೇಕಗೊಂಡು ತಟ್ಟನೆ ಎದ್ದು ಮುಂದೆ ಬರುವನು.) (ಪರದೆ ಬೀಳುವುದು.)

---

## ೪. ಮಾರ್ಗ.

**ಲಕ್ಷ್ಮಣ:** — ಕೊಲೆಯನ್ನು ಮಾಡಲಿಕ್ಕೇ ಬೇಕು. ನನ್ನ ಹೃದಯದಲ್ಲಿ ವಿಪ್ಲವವಾಗಹತ್ತಿರುವುದು. (ಮೌನ) ಹೌದು ಕೊಲೆಯಾಗಲೇ ಬೇಕು. ಬಡವರ ದುಃಖನಿವಾರಣೆಯಾಗಲೇ ಬೇಕು. ಬಡವರು—ಐಶ್ವರ್ಯವಂತರೆಂಬ ಭೇದವನ್ನು ಬೇರುಸಹಿತ ಕಿತ್ತೊಗೆಯಬೇಕು. ಬಡವರನ್ನು ಪೀಡಿಸುವದನ್ನು, ಇಂದಿನ ಈ ಕೊಲೆಯನ್ನು ಕಂಡಾದರೂ ಇತರ ಧನಿಕರು ಬಿಡಲೇ ಬೇಕು. ಅಹಿಂಸೆಯು ಯಾರ ಮುಂದೆ? ನ್ಯಾಯ ಅನ್ಯಾಯದ ಅರಿವು ಇರುವ ವಿಚಾರಿಗಳ ಮುಂದೆ. ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವುದಕ್ಕೋಸ್ಕರ ಶಕ್ತಿಹೀನರ ರಕ್ತಹೀರಿ, ತಮ್ಮ ಅಧಿಕಾರ ಬಲವನ್ನು ತೋರಿಸುವ ಪಶುಗಳ ಮುಂದೆ ಹಿಂಸೆಯ ಪ್ರಭಾವವನ್ನೇ ತೋರಿಸಬೇಕು. ಅದಕ್ಕಾಗಿ ಇಂದು ಆ ನಮ್ಮ ಗಿರಣೀ ಮಾಲಕನ ಜೀವ ಸಮರ್ಪಣೆಯಾದರೂ ಆಗಲಿಕ್ಕೇ ಬೇಕು! ನನ್ನ ಹೃದಯದಲ್ಲಿ ಬಹುಕಾಲದಿಂದ ಧಗಧಗಿಸುತ್ತಿದ್ದ ಸೇಡಿನ ದಾವಾಗ್ನಿಯು ಇಂದು ಈ ಕೊಲೆಯೆಂಬ ಜಲಧಾರೆಯಿಂದ ನಂದಿ ಹೋಗಲೇ ಬೇಕು.

(ಕಂದ) ಮೋಹನ.

ಧನ ಮದದೋಳ್—ಮೈಮರೆಯುವ ।
ಘನ—ಘಾತಕಿ ಕಡು ಪಾಪಾಂಡನ ನಾ ॥
ಎನಿತಾದರು ಸದೆ ಬಡಿಯುತೆ ।
ಜನತೆಯ ಭಾಗ್ಯವ—ನುಳಿಸುವೆನದರಿಂ ॥

(ಓಡುವನು).

## ೫. ಮುಕ್ತಾಬಾಯಿಯ ಶಯನಾಗಾರ.

(ರಾತ್ರಿ:—ಮಧ್ಯದಲ್ಲಿ ಕಿಟಿಕಿಗೆ ಹೊಂದಿ ಮಂಚ. ಸೊಳ್ಳೆಪರದೆಯು ಇಳಿಯಬಿಟ್ಟಿರುವುದು. ಒಂದು ಕಡೆ ವಿದ್ಯುಚ್ಛಕ್ತಿಯ ಬೀಸಣಿಕೆಯು ಭರದಿಂದ ತಿರುಗುತ್ತಿರುವುದು. ಚಂದ್ರನ ಪೂರ್ಣಪ್ರಕಾಶವು ತೆರೆದಿಟ್ಟಿರುವ ಗವಾಕ್ಷದ ಮೂಲಕ ಕತ್ತಲೆಯಿದ್ದ ಕೊಠಡಿಯಲ್ಲಿ ಪಸರಿರುವುದು. ಸುತ್ತಲೂ ಪುಷ್ಪ ವಾಟಿಕೆಗಳು. ಮುಕ್ತೆಯು ಕಿಟಿಕಿಯ ಬಳಿ ನಿಂತು ಚಂದ್ರನನ್ನು ನೋಡುತ್ತಾ ಹಾಡುತ್ತಿರುವಳು)

ಮಾಂಡ್—ದಾದರ್

**ಮುಕ್ತಾ:—** ಚಂದ್ರನಾ ವಿಲಾಸಕರಾ ।
ಮೋದವಾದ ಸುಂದರತಾ ॥
ಚಂದ್ರಿಕಾ ಪ್ರಕಾಶ ಝರೀ ।
ನಾಶಗೈವ ಹೃದೋಚಿಂತಾ ॥
ಧವಳಕಿರಣ ಶೋಭಕರಾ ।
ವಿಮಲ ಹಸನವೂ ಮನಕೇ ॥

ಆಹಾ! ಚಂದ್ರನು ಪ್ರಕಾಶಮಾನವಾದ ತನ್ನ ಬೆಳಕನ್ನು ಭೂಮಿಯ ಮೇಲೆ ಹರಿಯಗೊಟ್ಟಿರುವನು. ಪ್ರಣಯಿಗಳು ಈ ಶೀತಲ ಚಂದ್ರ ಪ್ರಕಾಶದಲ್ಲಿ ಪ್ರೇಮಾಲಿಂಗನದೊಡನೆ ಪ್ರಣಯ ಗೀತೆಯನ್ನು ಹಾಡ ತೊಡಗಿರುವರು. ಮಾತೆಯರು ತಮ್ಮ ಶಿಶುಗಳೊಂದಿಗೆ ಸುಖನಿದ್ರೆಯಲ್ಲಿ ನಿರತರಾಗಿರುವರು. ಸಮಸ್ತ ಜಗತ್ತೂ ಈ ಸಮಯದಲ್ಲಿ ದುಃಖದ ಉದ್ವೇಗವಿಲ್ಲದೆ ಶಾಂತಮಯ ಆನಂದದಲ್ಲಿ ತಲ್ಲೀನವಾಗಿರುವುದು. (ಚಿಂತಿಸಿ) ನಿರ್ಭಾಗ್ಯೆಯಾದ ನಾನು ಮಾತ್ರ ದುಃಖ ಮಾಡುತ್ತಿರುವೆನೇಕೆ? ದೇವಾ, ನಾನು ಯಾವ ಅಪರಾಧವನ್ನು ಮಾಡಿರುವೆನು? ದರಿದ್ರರಾಗಿರುವ ನಮ್ಮ ಗಿರಣೀಕೂಲಿಕಾರರಲ್ಲಿ, ಪ್ರತಿಯೊಬ್ಬರಿಗೂ ಒಂದೆರಡಾದರೂ ಮಕ್ಕಳಿವೆ. ಆದರೆ ಗಿರಣೀ ಮಾಲಕನ ಪತ್ನಿಯಾಗಿ, ಸಮಸ್ತ ಸೌಭಾಗ್ಯಗಳನ್ನೂ ಅನುಭವಿಸುತ್ತಿದ್ದು, ಎಲ್ಲರಿಂದಲೂ ಮಾನಿಸಲ್ಪಡುವ ನಾನು ಇಗೋ ಮಗುವಿನ ಕೋಮಲ ಸ್ಪರ್ಶಕ್ಕಾಗಿ ಅನುದಿನವೂ ನಿನ್ನೊಡನೆ ಬೇಡುತ್ತಿರುವೆನು. ಮಾತೃಸುಖ ವಿಹೀನಳಾದ ನನಗೆ ಈ ಸೌಭಾಗ್ಯಗಳ ಬೇಸರ ಹತ್ತಿರುವುದು. (ಸುಖ ಸಾಮುಗ್ರಿಗಳು ತುಂಬಿರುವ ಕೊಠಡಿಯನ್ನೊಮ್ಮೆ ನೋಡಿ) ನನ್ನ ದುಃಖವನ್ನು ಅತಿರೇಕಗೊಳಿಸುವ ಈ ವಿಲಾಸೀ ವಸ್ತುಗಳೇಕೆ? ಇವು

ಗಳಿಂದ ನನ್ನ ದುಃಖವು ಶಮನವಾಗುವುದೆ? (ಚಿಂತಿಸುತ್ತಾ ಹಾಸಿಗೆಯಲ್ಲಿ ಮಲಗಿಕೊಳ್ಳುವಳು. ಸ್ವಲ್ಪ ಹೊತ್ತಿನ ನಂತರ ಪುನಃ ಎದ್ದು) ಅಯ್ಯೋ, ಏನು ಮಾಡಿದರೂ ನಿದ್ದೆ ಹತ್ತಲೊಲ್ಲದು. ಬಡ ಭಿಕ್ಷುಕಿಗೆ ಸಿಗುವಷ್ಟು ನಿದ್ರಾಸುಖವು ನನಗೆ ದುರ್ಲಭವಾಯಿತೇ—ಹಾಯ್! ದುಃಖಿನಿ ಮುಕ್ತಾ. (ಪುನಃ ಮಲಗಿಕೊಳ್ಳುವಳು. ಸ್ವಲ್ಪ ಹೊತ್ತಿನ ತರುವಾಯ ಲಕ್ಷ್ಮಣನು, ಜಗಜೀವನನ ಕೊಲೆಗೆಂದು ಕಠಾರಿ ಹಿಡಕೊಂಡು ಕತ್ತಲೆಯಲ್ಲಿ ಮೆಲ್ಲನೆ ಪ್ರವೇಶಿಸಲು, ಸಮೀಪದಲ್ಲಿದ್ದ ಪುಷ್ಪವಾಟಿಕೆಗೆ ತಾಗಿ, ಅದು ಕೆಳಗೆ ಬಿದ್ದು ಒಡೆದು ಹೋಗುವುದು. ಮುಕ್ತೆಯು ಥಟ್ಟನೆ ಎದ್ದು ಗುಂಡಿ ಒತ್ತಿ ವಿದ್ಯುಚ್ಛಕ್ತಿಯನ್ನು ಉರಿಸಿ ಲಕ್ಷ್ಮಣನನ್ನು ನೋಡಿ ಭಯಾಶ್ಚರ್ಯಗಳಿಂದ)

**ಮುಕ್ತಾ:**— ಯಾರು!

**ಲಕ್ಷ್ಮಣ:**— (ತುಸು ಅಧೀರನಾಗಿ) ನಾನು.

**ಮುಕ್ತಾ:**— ಈ ರಾತ್ರಿಯಲ್ಲಿ ನನ್ನ ಶಯ್ಯಾಗೃಹಕ್ಕೆ ಯಾಕೆ ಬಂದಿರುವೆ?

**ಲಕ್ಷ್ಮಣ:**—(ಸ್ಥಿರ ಮನಸ್ಸಿನಿಂದ) ರಾಯರ ಕೊಲೆ ಮಾಡಲಿಕ್ಕೆ.

**ಮುಕ್ತಾ:**— ಏನು ಕೊಲೆ! ಯಾಕೆ?

**ಲಕ್ಷ್ಮಣ:**— ಹೌದು ಕೊಲೆ! ಧನಿಕರ ಅತ್ಯಾಚಾರಗಳನ್ನು ನಾಶಪಡಿಸುವುದಕ್ಕಾಗಿ! ಹೃದಯ ದುಃಖವನ್ನು ಶಮನ ಮಾಡಲಿಕ್ಕಾಗಿ! ಎಲ್ಲಿ ರಾಯರು? (ಮುಂದಾಗುವನು. ಮುಕ್ತೆಯು ಭಯದಿಂದ ಲಕ್ಷ್ಮಣನ ಕೈಯನ್ನು ಥಟ್ಟನೆ ಹಿಡಿಯುವಳು. ಆಕೆಯ ಸ್ಪರ್ಶದಿಂದ ಒಮ್ಮೆಗೆ ಆತನ ಮನಸ್ಸಿನ ವಿಕಾರವು ಮಾಯವಾಗುವುದು.)

**ಮುಕ್ತಾ:**—(ಹಿಂಜರಿಯುತ್ತಾ) ನೀನು ಯಾರು? ನನ್ನ ಪತಿಯವರು ನಿನಗೆ ಏನು ಅನ್ಯಾಯವನ್ನು ಮಾಡಿರುವರು?

**ಲಕ್ಷ್ಮಣ:**—(ಶಾಂತತೆಯಿಂದ) ನಾನು ಲಕ್ಷ್ಮಣನೆಂಬ ಒಬ್ಬ ಬಡ ಕೂಲಿಕಾರನು; ನಿಮ್ಮ ಪತಿಯವರ ಗಿರಣಿಯಲ್ಲಿ ದುಡಿಯುವವನು. ಕೂಲಿಕಾರರು ರಾಯರಿಗೆ ಅವರ ನಾಯಿಮರಿಗಿಂತಲೂ ಹೀನ. ಕೂಲಿಕಾರರ ರಕ್ತಹೀರಿ ಸಂಪಾದಿಸಿದ ಹಣದಿಂದ ಅವರು ಕೂಲಿಕಾರರ

ಕಷ್ಟ ಕಾಲದಲ್ಲಿ ಸಹಾಯಮಾಡಲೊಪ್ಪರು. (ಶಾಂತತೆಯು ದುಃಖವಾಗಿ ಮಾರ್ಪಟ್ಟು) ನಮ್ಮ ಮಡದಿ ಮಕ್ಕಳು ಉಪವಾಸ ಬಿದ್ದರೂ, ರೋಗ ಪೀಡೆ ಯಿಂದ ಸತ್ತರೂ, ಅವರು ನಮ್ಮನ್ನು ಕೇಳುವ ಹಾಗಿಲ್ಲ. ಅಂತಹ ಯಜಮಾನರು ಇರಬಾರದೆಂದು ಅವರ ಕೊಲೆ ಮಾಡಲು ಬಂದಿರುವೆನು.

**ಮುಕ್ತಾ**:—ನಿನಗೆ ಬುದ್ಧಿ ಇಲ್ಲ. ಇಷ್ಟು ಅಲ್ಪ ವಿಷಯಕ್ಕಾಗಿ ಯಜಮಾನರ ಕೊಲೆ ಮಾಡುವುದೇ. ರಾಯರಲ್ಲಿ ಏಕೆ ಕೇಳುವಿ. ಮನೆ ಜರರು ಇದ್ದಾರೆ ತಾನೆ.

**ಲಕ್ಷ್ಮಣ**:—ಏನು ಬುದ್ಧಿ ಇಲ್ಲವೆ? ಇದೆ, ಇದೆ. ಅಮ್ಮನವರೇ, ನಾನು ಬಿ. ಎ. ಪಾಸಾಗಿದ್ದೇನೆ. ಕ್ಷುಲ್ಲಕ ಅಪರಾಧಗಳನ್ನು ಸಹಿಸಿ ಕೊಳ್ಳುವ ಶಕ್ತಿಯು ನನ್ನಲ್ಲಿದೆ. ನ್ಯಾಯ ಅನ್ಯಾಯಗಳನ್ನು ಪರಿಶೀಲಿ ಸುವ ಬುದ್ಧಿಯು ನನ್ನಲ್ಲಿದೆ. ಅಮ್ಮನವರೇ, ಸಣ್ಣ ಸಣ್ಣ ವಿಷಯಗಳಿಗಾಗಿ ನಾನು ಕೊಲೆ ಮಾಡುವ ಹವ್ಯಾಸಕ್ಕೆ ಹೋಗುತ್ತಿರಲಿಲ್ಲ. ಆದರೆ ರಾಯ ರಿಂದ ಕೂಲಿಕಾರರಿಗಾದ ಅನ್ಯಾಯವನ್ನು ನೆನಸಿಕೊಂಡರೆ ನನ್ನ ಹೃದ ಯವು ಬಿರಿಯುತ್ತದೆ. ಮನೆಜರನ ಕೂಡೆ ಸಹಾಯ ಕೇಳಲು ಹೋಗಿ ಈ ಅವಸ್ಥೆ ಆಯಿತು. (ಅಂಗಿ ತೆಗೆದು ಗಾಯದ ಬರೆಗಳನ್ನು ತೋರಿಸುವನು. ಮುಕ್ತೆಯು ಹೆದರುವಳು.) ಈ ಹೊಡೆತದ ಪ್ರತಿಯೊಂದು ಗಾಯವನ್ನು ನೋಡಿದರೆ ಸೇಡನ್ನು ತೀರಿಸುವ ಪಿಪಾಸೆಯು ಯಾರಿಗೆ ಹುಟ್ಟಲಿಕ್ಕಿಲ್ಲ? ಸೇಡು ತೀರಿಸದ ವಿನಹ ಈ ಗಾಯಗಳು ಮಾಸುವಂತಿಲ್ಲ.

**ಮುಕ್ತಾ**:—(ಕನಿಕರದಿಂದ) ಇಷ್ಟು ಅನ್ಯಾಯವೂ ಆಗಿರುವುದೇ? ಮುಂಚಿನಿಂದಲೂ ಪ್ರಸಿದ್ಧಿಯಾಗಿರುವ ಈ ಮನೆತನದ ಹೆಸರಲ್ಲಿ, ನಮಗೆ ಗೊತ್ತಿಲ್ಲದಂತೆ ಇಷ್ಟು ಅನ್ಯಾಯಗಳೂ ನಡೆಯುತ್ತಿವೆಯೇ?

**ಲಕ್ಷ್ಮಣ**:—ಅಮ್ಮನವರೇ ಹೌದು, ಈಗಲೂ ಆಗುತ್ತಿರುವುದು; ಈ ಮನೆತನದ ಹೆಸರಲ್ಲಿ, ನಿಮ್ಮ ಗಿರಣಿಯಲ್ಲಿ ಅಧಿಕಾರ ನಡಿಸುವ ನೌಕರರು ಅಧಿಕಾರ ಮದದಿಂದ ಪ್ರತಿದಿನವೂ ಇಂಥಾ ಎಷ್ಟೋ ಅನ್ಯಾಯಗಳನ್ನು ಮಾಡುತ್ತಿರುವರು. ಬಡ ಕೂಲಿ ಬಾಲಿಕೆಯರ ಮಾನಹಾನಿಯೂ ಆಗು ತ್ತಿರುವುದು. ಇವೆಲ್ಲವೂ ನಿಮ್ಮ ಕಿವಿಗೆ ಬೀಳದಂತೆ ಅವರು ಬಹಳ

ಜಾಗ್ರತೆಯಿಂದಿರುವರು; ಅಂತೂ, ಯಾರಾದರೂ ಈ ಅನ್ಯಾಯಗಳನ್ನು ಪರರ ಮುಂದೆ ಹೇಳಿದರೆ ಅವರ ಸಂಬಳದಿಂದ ಹಣ ಕಡಿದು ಜುಲ್ಮಾನೆಯನ್ನೋ, ಇನ್ನು ಎಷ್ಟೋ ತರದ ಶಿಕ್ಷೆಗಳನ್ನೋ ಕೊಡುತ್ತಿದ್ದಾರೆ.

**ಮುಕ್ತಾ:**—ಆಶ್ಚರ್ಯ! ನಮ್ಮ ಪತಿಯವರಂತಹ ಶಿಕ್ಷಿತ ಹಾಗೂ ಪ್ರಖ್ಯಾತಿಪಟ್ಟ ಗಿರಣೀ ಮಾಲಕರ ಹೆಸರಲ್ಲಿ ಇಷ್ಟು ದಬ್ಬಾಳಿಕೆ ಅತ್ಯಾಚಾರಗಳು ನಡೆಯುವುದು ಆಶ್ಚರ್ಯ!

**ಲಕ್ಷ್ಮಣ:**—ಹೌದಮ್ಮಾ ಆಶ್ಚರ್ಯ. ನಿಮ್ಮ ಪತಿಯವರು ಶಿಕ್ಷಿತರೆಂದೂ, ಗಿರಣಿಯಲ್ಲಿ ಕಾನೂನು ಶಿಸ್ತುಗಳನ್ನು ಇಟ್ಟಿರುವವರೆಂದೂ, ಪ್ರಸಿದ್ಧಿ ಹೊಂದಿದ್ದರೂ ಒಳಗೊಳಗೆ ಅವರೇ ಇಂಥ ಅನ್ಯಾಯಗಳಿಗೆ ಪ್ರೋತ್ಸಾಹ ಕೊಟ್ಟು, ನೋಡುವವರಿಗೆ ಏನೂ ಅರಿಯದವರಂತೆ ನಟಿಸುತ್ತಿರುವರು. ಯಜಮಾನರುಗಳ ಪೂರ್ಣ ಬೆಂಬಲವಿರದೆ ನೌಕರರಿಗೆ ಇಂಥಾ ದಬ್ಬಾಳಿಕೆಯನ್ನು ಮಾಡಲು ಧೈರ್ಯವೆಲ್ಲಿ ಬರಬೇಕು?

**ಮುಕ್ತಾ:**—ಇತರ ಗಿರಣಿಗಳು ಶಿಸ್ತು ಕಾನೂನುಗಳನ್ನು ಸರಿಯಾಗಿ ಪಾಲಿಸದೆ, ಕೂಲಿಕಾರರಿಗೆ ಸರಿ ಕೂಲಿ ಕೊಡದೆ, ಬಹಳ ನಿಕೃಷ್ಟ ಸ್ಥಿತಿಯಲ್ಲಿವೆಯೆಂದು ಪತಿಯವರೇ ಇತರ ಗಿರಣೀ ಮಾಲಕರಿಗೆ ಪರಿಹಾಸ್ಯಮಾಡುತ್ತಿರುವರಲ್ಲವೆ?

**ಲಕ್ಷ್ಮಣ:**—ಹೌದು. ತಮ್ಮಲ್ಲಿದ್ದ ನ್ಯೂನತೆಗಳನ್ನು ಮುಚ್ಚಿ, ಪರರ ದುರ್ಬಲತೆಯನ್ನೂ ತಮ್ಮ ಶ್ರೇಷ್ಠತ್ವವನ್ನೂ ಮುಂದಿ ಎದುರಿಗೆ ಪ್ರದರ್ಶಿಸುವುದು ನಮ್ಮ ಗಿರಣಿಯ ಸ್ವಭಾವವಾಗಿದೆ. ಅಮ್ಮನವರೇ ನಮಗೆ ಸರಿ ಕೂಲಿ ಸಿಗದೆ ಎರಡು ತಿಂಗಳು ಕಳೆದುಹೋದುವು.

**ಮುಕ್ತಾ:**—(ಆಶ್ಚರ್ಯದಿಂದ) ಎರಡು ತಿಂಗಳಾದುವೆ! ನಮಗಾಗಿ ಸಾವಿರಾರು ರೂಪಾಯಿ ವ್ಯಯಿಸುವ ಪತಿಯವರು, ಬಡವರಾದ ನಿಮ್ಮನ್ನು ಉಪವಾಸ ಹಾಕಿ ನರಳಿಸುವರೇ!

**ಲಕ್ಷ್ಮಣ:**—ಬಡವರಾಗಿಯೇ ಹುಟ್ಟಿ, ಬಡವರಾಗಿಯೇ ಬೆಳೆದು, ಬಡವರಾಗಿಯೇ ಜೀವಿಸಬೇಕಾಗಿ ಬಂದಿರುವ ನಮ್ಮಂಥವರಿಗೆ ನ್ಯಾಯ

ವಾಗಿ ಸಲ್ಲಬೇಕಾದ ಕೂಲಿಯುನ್ನು ಕೊಡದೆ ಹೋದರೆ ನಾವು ಹೇಗೆ ಜೀವಿಸಬೇಕು ತಾಯಿ?

**ಮುಕ್ತಾ:**—ಹಾ! ನಮ್ಮ ಗಿರಣಿಯ ಅಂತರಂಗದ ಸ್ಥಿತಿ ಈ ರೀತಿ ಶೋಚನೀಯವಾಗಿರುವುದೆ? ನಮ್ಮ ಕೂಲಿಕಾರರು ಅನ್ನವಿಲ್ಲದೆ ನರಳುತಿದ್ದು ನಾವು ಮಾತ್ರ ಸಂತೋಷದಿಂದ ಕಾಲಹರಣ ಮಾಡುತ್ತಿರುವೆವೆ? (ಚಿಂತಿಸುವಳು.)

**ಲಕ್ಷ್ಮಣ:**—ಅಮ್ಮಾ, ನಿಮ್ಮ ಹೃದಯವನ್ನು ಇನ್ನೂ ದುಃಖದಿಂದ ಕರಗಿಸಿ ಬಿಡುವಂಥಾ ಅನೇಕ ವಿದ್ಯಮಾನಗಳು ನಮ್ಮಾ ಗಿರಣಿಯಲ್ಲಿ ನಡೆಯುತ್ತಲಿವೆ. ಅವೆಲ್ಲವನ್ನೂ ಹೇಳಿದರೆ ಎಂಥಾ ಕಠಿಣ ಹೃದಯದವರೂ ದುಃಖಪಡುವರು.

**ಮುಕ್ತಾ:**—ಬೇಡ, ಹೇಳಬೇಡ. ನನಗೆ ಇಷ್ಟನ್ನು ಕೇಳಿಯೇ ಸಾಕಾಗಿರುವುದು. ಬರಿಯ ಪರರ ಕಷ್ಟದ ಸುದ್ದಿಯನ್ನು ಕೇಳಿದ ನನ್ನ ಮನಸ್ಸಿನಲ್ಲಿ ಇಷ್ಟು ದುಃಖದ ಉದ್ವೇಗ ಉಂಟಾಗುತ್ತಿದ್ದು, ಪ್ರತ್ಯಕ್ಷ ಅಂಥಾ ಕಷ್ಟಗಳನ್ನು ಅನುಭವಿಸಬೇಕಾದ ಸ್ಥಿತಿ ಬಂದರೆ, ನನ್ನ ಅವಸ್ಥೆಯು ಹೇಗಾದೀತೋ ಕಾಣೆ. (ತಲೆ ಬಗ್ಗಿಸಿ ನಿಲ್ಲುವಳು)

**ಲಕ್ಷ್ಮಣ:**—(ಕುತೂಹಲದಿಂದ) ಅಮ್ಮನವರೆ, ಹೆಂಗುಸರ ಮನಸ್ಸು ಕೋಮಲವೆಂದು ತಿಳಿದಿರುವೆನು. ಆದುದರಿಂದ ಬಡವರ ದುಸ್ಥಿತಿಯನ್ನು ಕೇಳಿ ನಿಮ್ಮ ಮನಸ್ಸಿಗೆ ಕಳವಳವಾದುದು ಆಶ್ಚರ್ಯವಲ್ಲ. ಅಂತೂ ಬಡವರ ಕಷ್ಟದಲ್ಲಿ ಸಹಾನುಭೂತಿ ತೋರಿಸುವ ತಮ್ಮಂಥವರೂ ಇಷ್ಟು ಸುಖದಲ್ಲಿರಬೇಕೆ? ಈ ಸುಖವಿಲಾಸಗಳಿಗಾಗಿ, ಈ ಕನಕ ಭೂಷಣಗಳಿಗಾಗಿ ದುಂದು ವ್ಯಯ ಮಾಡುತ್ತಿರುವ ಅಪಾರದ್ರವ್ಯವನ್ನು ಬಡವರ ಏಳಿಗೆಗಾಗಿ ಯಾಕೆ ಸದ್ವಿನಿಯೋಗ ಮಾಡಕೂಡದು? ನಮ್ಮ ಗಿರಣಿಯಲ್ಲಿ ಅರಿವೆಗಳಾಗುತ್ತಿದ್ದು ನಮ್ಮ ಗಿರಣಿಯ ಕೆಲಸಗಾರರಿಗೆ ಉಡಲು ಸರಿ ಬಟ್ಟೆಗಳಿಲ್ಲದಾಗ, ನಮ್ಮ ದೇಶದ ಐಶ್ವರ್ಯವನ್ನು ಸೂರೆಗೊಂಡು ಹೋಗುತ್ತಿರುವ ಈ ಪರದೇಶಿ ಬಟ್ಟೆಗಳನ್ನು ನೀವು ಯಾಕೆ ಉಡಬೇಕು. (ಮುಕ್ತೆಯು ನಾಚಿಕೆಯಿಂದ ತಲೆ ಬಗ್ಗಿಸುವಳು) ಅಮ್ಮನವರೇ,

ನಮ್ಮೀ ದೇಶದಲ್ಲಿ ಲಕ್ಷಾಂತರ ಬಡವರು ದಿನಕ್ಕೆ ಒಂದು ತುತ್ತು ಅನ್ನಕ್ಕೆ ಗತಿಯಿಲ್ಲದೆ ನರಳುತ್ತಿರುವರು. ಈ ನಿರುದ್ಯೋಗದಂಥಾ ಭಯಂಕರ ಸಮಸ್ಯೆಯಿಂದಾಗಿಯೇ, ನಾನಿಂದು ಬಿ. ಎ. ಕಲಿತಿದ್ದರೂ ಕೇವಲ ಹನ್ನೆರಡು-ಹದಿನೈದು ರೂಪಾಯಿ ಸಂಬಳದ ಬಡ ಕೂಲಿ ಕಾರನಾಗಿ ದುಡಿಯುತ್ತಿರುವೆನು. ಇದಕ್ಕೆ ಕಾರಣರಾರು? ಆ ಪರ ದೇಶಿ ವಸ್ತ್ರಗಳ ಕೃತ್ರಿಮ ಸೌಂದರ್ಯಕ್ಕೆ ಬಲಿಬಿದ್ದು, ದೇಶೀಯ ಕೈಗಾ ರಿಕೆಗಳಿಗೆ ಪ್ರೋತ್ಸಾಹ ಕೊಡದೆ, ದೇಶದ್ರೋಹಿಗಳಾಗಿ ಮೆರೆಯುತ್ತಿರುವ ನಿಮ್ಮಂಥಾ ಧನಾಢ್ಯರೇ ಕಾರಣರು. (ಮುಕ್ತೆಯ ಮುಖದಲ್ಲಿ ಪಶ್ಚಾತ್ತಾಪದ ಲಕ್ಷಣ ತೋರುವುದು) ಅಮ್ಮನವರೇ ಬಡವನ ಮೇಲೆ ಮುನಿದುಕೊಳ್ಳ ಬೇಡಿ ಇಂದು ನನ್ನ ಹೃದಯ ದುಃಖವೆಲ್ಲವೂ ಜಲಪ್ರಪಾತದಂತೆ ರಭಸದಿಂದ ಹೊರದುಮುಕುತ್ತಿರುವುದು. ಕೊಡಿರಿ, ನಾವು ಕಷ್ಟ ಪಟ್ಟು ದುಡಿದ ಕೂಲಿಯನ್ನಾದರೂ ನಮಗೆ ಕೊಡಿರಿ. (ಕಾಲಿಗೆ ಬೀಳುವನು.)

**ಮುಕ್ತಾ:**—(ಹೃದಯ ಪರಿವರ್ತನೆಯೊಂದಿಗೆ ಸಜಲ ನೇತ್ರಳಾಗಿ) ಐಶ್ವರ್ಯ, ಸುಖವಿಲಾಸಗಳಿಂದ ಜೀವಿಸುತ್ತಿದ್ದು, ಬಡವರ ದುಃಖವನ್ನು ತಿಳಿಯದೆ ಇದ್ದ ನನ್ನ ಕಣ್ಣನ್ನು ನೀನಿಂದು ತೆರೆದೆ. ಲಕ್ಷ್ಮಣಾ, ಬಡತನದ ದುಃಖ ಪರ್ಯವಸಾಯಿಯಾದ ಸ್ಥಿತಿಯನ್ನು ನೀನು ನನ್ನ ಮುಂದಿಟ್ಟು, ನನ್ನ ಹೃದಯವು ಬಡವರಿಗಾಗಿ ದುಃಖಿಸುವಂತೆ ಮಾಡಿದೆ. ಇದಕ್ಕಾಗಿ ನಾನು ನಿನಗೆ ಆಭಾರಿಯಾಗಿರುವೆನು. ಇಂದಿನಿಂದ ನಾನೂ ಈ ವಿಲಾಸ ಗಳನ್ನು ತ್ಯಜಿಸಿ ಬಡವರ ಉದ್ಧಾರಮಾಡಲು ಪ್ರಯತ್ನಿಸುವೆನು.

**ಲಕ್ಷ್ಮಣ:**—(ಸಂತೋಷದಿಂದ) ಅಮ್ಮನವರೇ, ನಿಮ್ಮ ಸಹಾನುಭೂತಿ ಪರ ಸಹಾಯದ ಭರವಸೆಯಿಂದಾಗಿ ಬಡವರ ಉದ್ಧಾರವಾಗುವ ಆ ಸಮಯವು ದೂರವಿರುವುದಿಲ್ಲೆಂಬ ಆಸೆಯು ನನ್ನಲ್ಲಿ ಹುಟ್ಟುತ್ತಿರುವುದು.

**ಮುಕ್ತಾ:**—(ಕೆಳಗೆ ಬಿದ್ದಿರುವ ಮುತ್ತಿನ ಹಾರವನ್ನು ಹೆಕ್ಕಿ, ಲಕ್ಷ್ಮಣ ನಿಗೆ ನೀಡಿ) ಲಕ್ಷ್ಮಣಾ, ಇಗೋ ಹತ್ತುಸಾವಿರ ರೂಪಾಯಿ ಬೆಲೆ ಬಾಳುವ ಈ ಮುತ್ತಿನ ಹಾರವನ್ನು ತೆಗೆದುಕೊ. ನಿನ್ನ ಬಡತನವು ದೂರ ವಾಗಲಿ.

**ಲಕ್ಷ್ಮಣ:**—ಅಮ್ಮಾ, ನನಗೇಕೆ ಇಷ್ಟು ರೂಪಾಯಿಗಳು. ನಾನಿಷ್ಟು ಹಣವನ್ನು ಏನು ಮಾಡಲಿ. ಬಡವನಾದರೂ ನಾನು ಬಡತನದಲ್ಲೇ ತೃಪ್ತಿಪಡುವೆನು. ಹಣವು ಕೈಯಲ್ಲಿ ನಲಿದಾಡಿತೆಂದರೆ ಮತ್ತೂ ಹಣ ಗಳಿಸಬೇಕೆಂಬ ಲೋಭವು ಹುಟ್ಟುವುದು. ಕೇವಲ ಬಡತನದಲ್ಲೇ ನೆಮ್ಮದಿಯಲ್ಲಿರಲು ಸಾಕಾಗುವಷ್ಟು ಅಲ್ಪ ದ್ರವ್ಯವು ನನಗೆ ಸಿಕ್ಕರೆ ಅದರಲ್ಲೇ ತೃಪ್ತಿಪಡುವೆನು. ಈ ಹಾರವನ್ನು ಸರ್ವಥಾ ನಾನು ಸ್ವೀಕರಿಸಲಾರೆನು.

**ಮುಕ್ತಾ:**—(ಆಲೋಚಿಸಿ, ಕಡೆಗೆ ಒಳಗೆ ಹೋಗಿ ಒಂದು ಥೈಲಿಯನ್ನು ತಂದು) ಹಾಗಾದರೆ, ಈ ಎರಡು ಸಾವಿರದ ಥೈಲಿಯನ್ನಾದರೂ ಸ್ವೀಕರಿಸು. ನಿನ್ನ ಮಡದಿ ಮಕ್ಕಳೊಂದಿಗೆ ಸುಖಜೀವನವನ್ನು ಸಾಗಿಸು.

**ಲಕ್ಷ್ಮಣ:**—ಅಮ್ಮಾ, ನಾನು ಬಡಕೂಲಿ ಬಂಧುಗಳ ದುಃಖನಿವಾರಣೆ ಮಾಡಲು ಇಲ್ಲಿಗೆ ಬಂದಿರುವೆನು ಹೊರತು, ನನ್ನೊಬ್ಬನ ಬಡತನವನ್ನು ನೀಗಿಸಿಕೊಳ್ಳಬೇಕೆಂಬ ಸ್ವಾರ್ಥಬುದ್ಧಿಯಿಂದಲ್ಲ. ಆದುದರಿಂದ ಇದನ್ನು ತೆಗೆದುಕೊಳ್ಳಲಾರೆನು.

**ಮುಕ್ತಾ:**—(ಏನು ಮಾಡುವುದೆಂದು ತೋರದೆ, ಕಡೆಗೆ ನೂರರ ಎರಡು ನೋಟುಗಳನ್ನು ಕೊಟ್ಟು) ಲಕ್ಷ್ಮಣಾ ನನಗಾಗಿ ಇದನ್ನಾದರೂ ನೀನು ಸ್ವೀಕರಿಸಲೇ ಬೇಕು. ಬಡವರಿಗೆ ಸಹಾಯಮಾಡಬೇಕೆಂದು ನಿರ್ಧರಿಸಿರುವ ಶುಭಕಾರ್ಯದಲ್ಲಿ ಈ ದಾನವಾದರೂ ಮೊದಲನೆಯದಾಗಿ ಪರಿಣಮಿಸಲಿ.

**ಲಕ್ಷ್ಮಣ:**—(ತೆಗೆದುಕೊಂಡು) ಅಮ್ಮಾ, ಬಡವರ ಮೇಲೆ ನೀವಿಷ್ಟು ಕನಿಕರದೋರಿದುದಕ್ಕಾಗಿ ನಾನು ನಿಮಗೆ ಕೃತಜ್ಞನಾಗಿದ್ದೇನೆ. ನೀವು ನಿರ್ವಂಚನೆಯಿಂದ ಕೊಟ್ಟ ಈ ನಿಧಿಯನ್ನು ಸ್ವೀಕರಿಸದೆ ನಿಮ್ಮ ಮನ ನೋಯಿಸಲು ನನಗೆ ಇಚ್ಛೆಯಿಲ್ಲ. ಆಗಲಿ; ನನ್ನ ಕಷ್ಟದೂರ ಮಾಡಲು ಸಾಕಾಗುವಷ್ಟು ರೂಪಾಯಿಗಳನ್ನು ತೆಗೆದುಕೊಂಡು ಉಳಿದುದನ್ನು ಬಡ ಕೂಲಿಕಾರರಿಗೆ ನಿಮ್ಮ ಹೆಸರಲ್ಲಿ ಹಂಚಿಬಿಡುವೆನು.

**ಮುಕ್ತಾ:**— ಲಕ್ಷ್ಮಣಾ, ನೀನು ವಿದ್ಯಾವಂತನಿರುವಿ. ಕೂಲಿಕಾರರ ಏಳಿಗೆಯನ್ನು ಸಾಧಿಸು. ಆದರೆ ವೃಥಾಕೊಲೆಯಂಥಾ ಘೋರ ಪಾತಕಕ್ಕೆ ಕೈಹಾಕ ಬೇಡ. ನಿಮ್ಮ ಸುಧಾರಣೆಗಾಗಿ ಕೈಕೊಂಡ ನ್ಯಾಯವಾದ ಯಾವ ಕೆಲಸದಲ್ಲಿಯೂ ನಾನು ನಿಮಗೆ ಬೆಂಬಲವನ್ನೀಯುವೆನು.

**ಲಕ್ಷ್ಮಣ:**— ಮಾತೆ, ನೀವು ಬಡವರ ಬಂಧುವಾಗಿರುವಿರಿ. ಬಡವರ ಪಾಲಿಗೆ ಸಾಕ್ಷಾತ್ ಅನ್ನಪೂರ್ಣೆಯಾಗಿ ಜನಿಸಿದ ನಿಮ್ಮಿಂದಾದರೂ ಕೂಲಿ ಕಾರರ ದುಃಖ ನಿವಾರಣೆಯಾಗಲಿ.

ಮಾಂಡ್ — ಕಹೆರವಾ

**ಲಕ್ಷ್ಮಣ:**— ಶುಭೋದಯ ಮಹಾ । ಮಹಿಳಾ ವೀರಭಾರತೀ ।
ದೇವೀ ವೀರಭಾರತೀ ॥
ಸ್ವರ್ಗೀಯ ಪಾವನೆ । ದೀನೊದ್ಧಾರೆ ॥
ಸಾರ್ಥಕ ಜೀವನೆ । ವೀರಭಾರತಿ ॥
ದೇವಿ ವೀರಭಾರತೀ ॥

(ವಂದಿಸುವನು)

## ತೃತೀಯಾಂಕ.

### ೧. ಗಿರಣಿಯ ಮುಂದುಗಡೆಯ ಮೈದಾನು.

**(ಮುಷ್ಕರ ಹಿಡಿದ ಕೂಲಿಕಾರರ ಸಭೆ. ಕೆಂಬಣ್ಣದ ಧ್ವಜವು ಹಾರಾಡುತ್ತಿರುವುದು. ಲಕ್ಷ್ಮಣನ ಭಾಷಣ)**

**ಲಕ್ಷ್ಮಣ:**— ಬಂಧುಗಳೇ, ಇಂದು ನಾವು ಕೂಲಿಕಾರರ ಜನ್ಮಸಿದ್ಧ ಹಕ್ಕುಗಳನ್ನು ಪಡೆಯುವ ಸಲುವಾಗಿ ಇಲ್ಲಿ ಕೂಡಿರುತ್ತೇವೆ. ಕೂಲಿಕಾರರ ಕ್ರಾಂತಿ ಸೂಚಕವಾದ ಈ ಕೆಂಬಣ್ಣದ ಧ್ವಜವು ನಮ್ಮೆಲ್ಲರಿಗೂ ಸ್ಫೂರ್ತಿಯನ್ನು ಕೊಟ್ಟು ಧ್ಯೇಯಸಾಧನೆಗಾಗಿ ಪ್ರಾಣವನ್ನಾದರೂ ಅರ್ಪಿಸುವಂತೆ ನಮ್ಮನ್ನು ಹುರಿದುಂಬಿಸಲಿ.

ಸ್ವದೇಶೀ ಚಳವಳದಿಂದ ಅಪಾರಲಾಭ ಸಂಪಾದಿಸಿದರೂ ಕೂಲಿ ಏರಿಸಬೇಕೆಂಬ ನಮ್ಮ ಬೇಡಿಕೆಯನ್ನು ಜಗಜೀವನ ರಾಯರು ತಳ್ಳಿ ಹಾಕಿರುವರು. ಅಸ್ವಸ್ಥದಲ್ಲಿ ಬಿದ್ದರೆ ಔಷಧಿಗಾಗಿ ಒಂದು ರೂಪಾಯಿಯ ಎಡ್ವಾನ್ಸ್ ಕೂಡಾ ದೊರೆಯಲಾರದು. ದಿನ ಇಡೀ ಬೆವರಿಳಿಸಿ ದುಡಿದು ನಮಗೆ ಸಿಗುವುದು ಬರೀ ಅಯ್ವಾಣೆಗಳು. ಸಾಲದುದಕ್ಕೆ ಬೈಗಳು, ಹೊಡೆತ, ತುಳಿತ, ಹೆಂಗಸರ ಮೇಲೆ ಅತ್ಯಾಚಾರ. ಗೆಳೆಯರೇ, ನಮ್ಮಲ್ಲಿ ಮನುಷ್ಯತ್ವವಿದ್ದರೆ, ನಾವು ಬಾಯಿ ಬಾರದ ಮೂಕ ಪ್ರಾಣಿಗಳಲ್ಲವೆಂತಾದರೆ, ಈ ಅನ್ಯಾಯವನ್ನು ಎಂದೂ ಸಹಿಸಿಕೊಳ್ಳಬಾರದು. ನಾವೆಲ್ಲರೂ ಒಂದಾಗಿ ಮುಷ್ಕರ ಹಿಡಿದರೆ, ಇವರಿಗೆ ಮೋಟಾರುಗಳಲ್ಲಿ ಓಡಾಡಲು ಹೇಗೆ ಸಾಧ್ಯವಾಗುವುದೋ ನೋಡೋಣ. ನಮ್ಮ ಸುಧಾರಣೆಯು ನಮ್ಮ ಕೈಯಲ್ಲೇ ಇದೆ. ನಾವು ದುಡಿಯುವುದು, ಇವರು ಸುಖಪಡುವುದು, ಇದು ಯಾವ ನ್ಯಾಯ? ಇಂದೇ ನಾವು ನಮ್ಮ ಶರ್ತಗಳಿಗೆ ಪೂರ್ಣ ಮನ್ನಣೆಯು ದೊರೆಯುವ ವರೆಗೆ, ಕೆಲಸಕ್ಕೆ ಹೋಗುವುದಿಲ್ಲವೆಂದು ದೃಢ ಪ್ರತಿಜ್ಞೆ ಮಾಡೋಣ. ಸತ್ತರೆ ವೀರ ಸ್ವರ್ಗ; ಗೆದ್ದರೆ, ಕೂಲಿಕಾರರ ಸುದಿನದ ಉದಯ. ಕೂಲಿಕಾರರ ಸ್ವಾತಂತ್ರ್ಯಕ್ಕಾಗಿ ಪ್ರಾಣ ತ್ಯಾಗ ಮಾಡಲು ಯಾರು ಸಿದ್ಧರಿರುವಿರಿ?

**ಎಲ್ಲರೂ:**—**(ಉತ್ಸಾಹಿತರಾಗಿ ಏಕಕಂಠದಿಂದ)** ನಾವೆಲ್ಲರೂ.

**ಲಕ್ಷ್ಮಣ:**—ಭಲೆ; ನಿಮ್ಮ ಧೈರ್ಯವನ್ನು ನೋಡಿ ಪರಮಾನಂದ ವಾಯಿತು. ಕೂಲಿಕಾರರಿಗೆ ಕಷ್ಟ ಪರಂಪರೆಗಳನ್ನು ಕೊಡುವ ದಿನಗಳು ಇಂದಿಗೆ ಅಂತ್ಯವಾದುವೆಂದು ರಾಯರು ತಿಳಿಯಲಿ.

**ಸಿದ್ದ:**—(ಅಂಜುತ್ತಾ ಎದ್ದು ನಿಂತು) ಲಕ್ಷ್ಮಣಾ, ನಿನ್ನ ಮಾತು ಕೇಳಿ ದರೆ ನಮ್ಮ ಇದ್ದ ಕೆಲಸವೂ ಹೋಗಬಹುದು. ಯಜಮಾನರ ಎದುರು ಪಂಥಕ್ಕೆ ನಿಲ್ಲುವುದು ನಮಗೆ ಸಾಧ್ಯವೆ? (ಎಲ್ಲರೂ ಅವನನ್ನೇ ನೋಡುವರು.) ಕೆಲಸ ಬಿಟ್ಟು ನಾವು ಎಷ್ಟು ದಿನ ಕೂಡಬಲ್ಲೆವು? ಸಿಕ್ಕುವ ಒಪ್ಪೊತ್ತು ಗಂಜಿಯನ್ನೂ ಕಳಕೊಂಡು, ನಾವು ಎಷ್ಟು ದಿನ ಬದುಕಬಹುದು? ಕೆಲಸ ಬಿಟ್ಟರೆ ಅನ್ನ ನೀನು ಹಾಕುತ್ತಿಯೊ?

**ಎಲ್ಲರೂ:**–(ಅವನ ಮೇಲೆ ಸಿಟ್ಟುಗೊಂಡು) ಮಾತಾಡಬೇಡ, ನಾಚಿಕೆ! ಹೇಡಿ! ದೂಡಿರಿ! (ಕೆಲವರು ಅವನ ಮೈಗೆ ಕಲ್ಲು ಬಿಸಾಡುವರು. ಲಕ್ಷ್ಮಣನು ಜನರಿಗೆ ಸಮಾಧಾನ ಮಾಡುತ್ತಾ ನಮಸ್ಕರಿಸಿ)

**ಲಕ್ಷ್ಮಣ:**—ಬಂಧುಗಳೇ, ದೂಷಿಸಬೇಡಿರಿ. ಪಾಪ, ಅವನಿಗೆ ಗೊತ್ತಿಲ್ಲ. ಅವನು ಇನ್ನೂ ದಾಸ್ಯದ ನರಕದೊಳಗೆ ಬಿದ್ದು ಅದನ್ನೇ ಸ್ವರ್ಗವೆಂದು ತಿಳಿದಿರುವನು. ಕೈಗೊಟ್ಟು ಮೇಲೆತ್ತುವುದು ತಿಳಿದವರಾದ ನಮ್ಮ ಕರ್ತವ್ಯ. (ಸಿದ್ದನನ್ನು ಉದ್ದೇಶಿಸಿ) ಸಿದ್ದಾ

ಮುಲ್ತಾನಿ— ತ್ರಿತಾಲ್.

**ಲಕ್ಷ್ಮಣ:**—ಜನುಮದ ಸಾರ್ಥಕವಿದೇನೋ ।
ಮನದೊಳು ಸ್ವಾರ್ಥಾಭಿಲಾಷೀ ॥
ಜನುಮ ಧ್ಯೇಯಗಳ ಮರ್ಮವನರಿಯದಾ ।
ಮಾನವನೇ ಶುನಕಾ ॥
ತರುಲತೆ ಬಳ್ಳಿಗಳು ತಾವೂ ।
ಪರಹಿತಗೋಸುಗವೆ ಸಾವೂ ॥
ಬರುವದು ಹಾರೈಸೀ ಸ್ವಾರ್ಥಗಾ ।
ನರರನು ಹೀನೈಸುತೀರ್ಪವೂ ॥

ಇದು ಒಬ್ಬಿಬ್ಬರ ಕೆಲಸವಲ್ಲ. ಸಮಸ್ತ ಕೂಲಿಕಾರರು ದೊಡ್ಡ ಸ್ವಾರ್ಥತ್ಯಾಗವನ್ನೇ ಮಾಡಲು ಸಿದ್ಧರಿರುತ್ತಾ ನೀನೊಬ್ಬನು ಬರೇ ಸ್ವಾರ್ಥ

ವನ್ನು ನೋಡುತ್ತಿರುವೆಯಲ್ಲಾ? ಧರ್ಮಯುದ್ಧವನ್ನು ಹೂಡಲಿರುವ ಈ ಶುಭ ದಿನದಲ್ಲಿ ನೀನೊಬ್ಬನು ಹೇಡಿಯಂತೆ ಸುಮ್ಮನಿರುವುದು ಉಚಿತ ವಲ್ಲ. ನೀನೂ ನಿನ್ನ ಅಲ್ಪಸೇವೆಯನ್ನು ಮಾಡಬೇಕು. ಹುಳಗಳಂತೆ ಹುಟ್ಟಿ ಬೆಳೆದು ಸಾಯುವ ಬದಲಾಗಿ ಏನಾದರೂ ಕಾರ್ಯ ಮಾಡಿ ಸಾಯೋಣ.

**ಇತರರು**:—ಕೂಲಿಕಾರರಿಗೆ ಜಯವಾಗಲಿ! ಮುಷ್ಕರವು ಜಯ ವಾಗಲಿ! (ಅಷ್ಟರಲ್ಲಿ, ಮೆನೆಜರ್ ಮಹೇಂದ್ರ, ಸಾರ್ಜಂಟ್, ನಾಲ್ವರು ಪೋಲೀಸರು ಪ್ರವೇಶಿಸುವರು. ಮೆನೆಜರನು ನೆಟ್ಟಗೆ ಲಕ್ಷ್ಮಣನಿದ್ದಲ್ಲಿಗೆ ಹೋಗಿ ಕೋಪದಿಂದ ಆತನ ಎದೆಗೆ ಪಿಸ್ತೂಲಿನ ಗುರಿಯಿಟ್ಟು)

**ಮಹೇಂದ್ರ**:—ಮೂರ್ಖಾ, ಕೂಲಿಕಾರರಿಗೆ ದುರ್ಬೋಧನೆ ಕೊಟ್ಟು ನಮ್ಮ ಮೇಲೆ ದಂಗೆ ಏಳುವಂತೆ ಮಾಡುತ್ತಿರುವೆ. ನಿನ್ನಂಥಾ ನೀಚನನ್ನು ಈಗಲೇ ಸುಟ್ಟುಬಿಡುತ್ತೇನೆ.

**ಲಕ್ಷ್ಮಣ**:—(ಶಾಂತತೆಯಿಂದ ಎದೆಯನ್ನು ಮುಂದಕ್ಕೆ ಒಡ್ಡಿ) ನನ್ನಂಥಾ ಅಲ್ಪ ಮನುಷ್ಯನ ಬಲಿಯಿಂದ ಬಡವರ ದುಃಖ ನಿವಾರಣೆಯಾಗುವುದಿದ್ದರೆ ನಾನು ಸಾಯಲು ಸದಾಸಿದ್ಧನೆ.

(ಲಕ್ಷ್ಮಣನ ಧೈರ್ಯವನ್ನೂ ಜನರ ಗುಂಪನ್ನೂ ಕಂಡು ಬೆರಗಾಗಿ ಮಹೇಂದ್ರನು ಪಿಸ್ತೂಲನ್ನು ಹಿಂದಕ್ಕೆಳೆಯುವನು. ಅಷ್ಟರಲ್ಲಿ ಸಾರ್ಜಂಟನು ಮುಂದಾಗಿ)

**ಸಾರ್ಜಂಟ**:—ಗಿರಣಿಯ ಮಾಲಕರನ್ನು ಕೊಲ್ಲಲು ದುರ್ಬೋಧಿಸಿದ ಆರೋಪಕ್ಕಾಗಿ ಲಕ್ಷ್ಮಣ—ಸುದರ್ಶನ, ಇವರ ಮೇಲೆ ಮ್ಯಾಜಿಸ್ಟ್ರೇಟ್ ಕೋರ್ಟಿನ ವಾರಾಂಟು ಇದೆ. ಲಕ್ಷ್ಮಣ—ಸುದರ್ಶನ ಅಂದರೆ ಯಾರು?

**ಲಕ್ಷ್ಮಣ—ಸುದರ್ಶನ**:—(ಮುಂದೆ ಬಂದು ಕೈ ನೀಡಿ) ನಾವೇ; ಬಳೆತೊಡಿಸುವಿರಾದರೆ ನಮ್ಮ ಅಡ್ಡಿಯಿಲ್ಲ.

**ಸಾರ್ಜಂಟ**:—(ಪೋಲೀಸರಿಗೆ) arrest them.

**ಸಿದ್ದ**:—(ಸಾರ್ಜಂಟನು, ಲಕ್ಷ್ಮಣನನ್ನು ದಸ್ತಗಿರಿಮಾಡಿದುದನ್ನು ಕಂಡು ಕೋಪದಿಂದ ದೊಡ್ಡ ದೊಣ್ಣೆಯನ್ನು ಎತ್ತಿ ಸಾರ್ಜಂಟನಿಗೆ ಹೊಡೆಯಲು ಹೋಗಿ)

ಪೋಲೀಸ್ ಗೀಲೀಸ್ ಎಂದು ನಾನು ನೋಡುವ ಹಾಗಿಲ್ಲ. ನಮ್ಮ ಮುಖಂಡರ ಮೈ ಮುಟ್ಟಿದೆಯೆಂದರೆ ಜೋಕೆ. ನಿನ್ನ ತಲೆ ಬುರುಡೆ ಹೊಡೆದು ಹಾಕುತ್ತೇನೆ. ಜೀವ ಸಹಿತ ನೀನು ಇಲ್ಲಿಂದ ಹೋಗುವ ಹಾಗಿಲ್ಲ. (ಮುಂದಾಗುವನು. ಉಳಿದ ಕೂಲಿಕಾರರೂ ಅಂಗಿ ಕೈಗಳನ್ನು ಮೇಲೆ ಮಾಡಿ ಪೋಲೀಸರಿಗೆ ಹೊಡೆಯಲು ಸಿದ್ಧರಾಗುವರು. ಸುದರ್ಶನನು ಇದನ್ನು ಕಂಡು ಗಾಬರಿಯಿಂದ ಅವರಿಗೆ ಕೈಮುಗಿದು)

**ಸುದರ್ಶನ:**—ಗೆಳೆಯರೆ. ಒಮ್ಮೆಲೆ ಬಲಪ್ರಯೋಗ ಮಾಡ ಬೇಡಿರಿ. ಬಲತ್ಕಾರದಿಂದ ನಮ್ಮ ಕೆಲಸವು ಹಾಳಾಗುವುದು; ನೀತಿ ಐಕ್ಯ ವಲ್ಲದೆ ನಮ್ಮ ಹತ್ತಿರ ಬೇರೆ ಆಯುಧಗಳಿಲ್ಲ. ಗಿರಣಿ ಮಾಲಕರ ಹತ್ತಿರ ದುಡ್ಡಿನ ಬಲವಿದೆ. ಸರಕಾರವು ಧನಿಕರಾದ ಅವರಿಗಲ್ಲದೆ ಬಡವರಾದ ನಮಗೆ ಸಹಾಯ ಮಾಡುವುದಿಲ್ಲ. ನಾನೂ ಲಕ್ಷ್ಮಣನೂ ನಿಮಗೆ ಸದಾ ಅಹಿಂಸೆಯನ್ನೇ ಬೋಧಿಸುತ್ತಿದ್ದರೂ, ಸರಕಾರದ ಸಹಾಯದಿಂದ, ಕೊಲೆ ಯನ್ನು ಬೋಧಿಸಿದರೆಂಬ ಸುಳ್ಳು ಆರೋಪದ ಮೇಲೆ ಮೆನೆಜರನು ನಮ್ಮನ್ನು ಹಿಡಿಸಿದ್ದಾನೆ. ಅದೇ ಸರಕಾರದ ಯಂತ್ರಗಳಾದ ಕೋರ್ಟು ಗಳಲ್ಲೂ ನಮಗೆ ನ್ಯಾಯ ಸಿಗುವಂತಿಲ್ಲ.

**ಸಾರ್ಜಂಟ:**—Enough, march them off

**ಲಕ್ಷ್ಮಣ:**—ನಾವು ಜೈಲಿಗೆ ಹೋಗುತ್ತೇವೆಂದು ನೀವು ಧೈರ್ಯ ಗುಂದದಿರಿ. ಐಕ್ಯಮತ್ಯದಿಂದ ಬಂದ ಕಷ್ಟಗಳನ್ನು ಸಹಿಸಲು ಸಿದ್ಧರಾದರೆ ನಮಗೆ ವಿಜಯವು ದೂರವಿಲ್ಲ. ನಾವು ಜೈಲಿನಿಂದ ಹೊರಗೆ ಬರುವಾಗ ಸ್ವತಂತ್ರರಾದ ಕೂಲಿಕಾರರೇ ನಮ್ಮನ್ನು ಸ್ವಾಗತೀಕರಿಸುವಂತಾಗಲೆಂದು ಪರಮಾತ್ಮನನ್ನು ಬೇಡಿಕೊಳ್ಳುವೆವು (ಹೋಗುವಾಗ) ಮುಷ್ಕರದ ವಿಷಯ ದಲ್ಲಿ ನಿರ್ಧಾರವನ್ನು ಬದಲಿಸಬೇಡಿರಿ. ನಮ್ಮ ಸಂಕಷ್ಟಗಳೇ ನಮ ವಿಜಯದ ಹೆದ್ದಾರಿ. ಲಾಲ್‌ಬಾವುಟಕೀ........

**ಎಲ್ಲರೂ:**—(ಆವೇಶದಿಂದ) ಜೈ! ಕೂಲಿಕಾರರ ಧುರೀಣರಿಗೆ ಜಯ ವಾಗಲಿ! ಮುಷ್ಕರವು ಜಯವಾಗಲಿ. ಲಾಲ್‌ಬಾವುಟಕೀ ಜೈ!

(ಲಕ್ಷ್ಮಣ-ಸುದರ್ಶನರನ್ನು ದಸ್ತಗಿರಿ ಮಾಡಿಕೊಂಡು ಹೋಗುವರು)

---

## ೨. ಮಾರ್ಗ.

(ಕೂಲಿಕಾರರು, ಕೆಂಬಣ್ಣದ ಧ್ವಜವನ್ನು ಹಿಡಿದುಕೊಂಡು ಸಿದ್ದನ ಮುಂದಾಳು ತನದಲ್ಲಿ ಪದ ಹಾಡುತ್ತಾ ಜಯಕಾರ ಹಾಕುತ್ತಾ ಮೆರವಣಿಗೆಯಾಗಿ ಬರುವರು.

ಏಳಿರೇಳಿರೇಳಿ ರಣದ ಕಾಳಿ ಕೂಗ್ಸ ಕರೆಯುನೂ ॥
ಕೇಳಿ ಕೇಳಿ ಕೂಲಿಕಾರ ಕ್ರಾಂತಿಯುಗದ ಮೊರೆಯನೂ ॥
ಏಕೆ ಸ್ವಾರ್ಥಬುದ್ಧಿಯೂ । ಅದೇಕೆ ಮೋಹ ಗುದ್ದಿಯು ।
ಅದೇಕೆ ಜೀವದಾಸೆಯೂ ॥
ಪರರ ತಂತ್ರ ದುರಿಯೊಳಿಂದು । ಸುಡುವರೆಮ್ಮ ಜನಗಳೂ ।
ಉರಿಯುನಾರಿಸಲ್ಕೆ ನಮ್ಮ ನೆತ್ತರನ್ನೆ ಸುರಿಸಲು ॥

(ಹೋಗುವರು.)

---

## ೨. ಗಿರಣಿಯ ಮುಂದುಗಡೆಯ ಗೇಟು.

(ಮುಷ್ಕರ ಹಿಡಿಯದೆ ಗಿರಣೀ ಕೆಲಸಕ್ಕೆ ಹೋಗುವ ಕೂಲಿಕಾರರನ್ನು ತಡೆಯಲು ರಾಧೆಯೂ, ಗೌರಿಯೂ ಪಹರೆಗೆ ನಿಂತಿರುವರು. ಇಬ್ಬರು ಕೂಲಿಕಾರರು ಕೆಲಸಕ್ಕಾಗಿ ಗೇಟು ಪ್ರವೇಶಿಸಲು ಬರುವರು.)

**ಗೌರಿ:**—(ಅವರಿಗೆ ಕೈಮುಗಿದು) ದಯುವಿಟ್ಟು ಕೆಲಸಕ್ಕೆ ಹೋಗಬೇಡಿ. ಲಕ್ಷ್ಮಣ-ಸುದರ್ಶನರು ನಮಗಾಗಿ ಸೆರೆಯಲ್ಲಿರುವರೆಂಬುದನ್ನು ಮರೆಯಬೇಡಿ.

**ರಾಧ:**—ಅಣ್ಣಾ, ಕೂಲಿಕಾರರ ಐಕ್ಯವನ್ನು ಮುರಿಯಬೇಡಿ. ನಿಮ್ಮ ಕಾಲಿಗೆರಗುವೆವು. ಬಡವರ ಹಿತಕ್ಕೆ ಘಾತಮಾಡಬೇಡಿ (ಕೂಲಿಕಾರರು ಅವರ ಮಾತನ್ನು ಲಕ್ಷಿಸದೆ ಇನ್ನೂ ಮುಂದರಿವಾಗ ಪಹರೆಗಾರರು ಅಡ್ಡ ಮಲಗುವರು.)

**ನರ್ಸ:**—ಕೇಚ, ಇವರ ಮಾತು ಕೇಳಬೇಡ; ಒಳ ಹೋಗುವ ನಾವು.

**ಕೇಚ:**—ಹ್ಯಾಗೊ? ನರ್ಸ; ಅಡ್ಡ ಮಲಗಿರುವರಲ್ಲಾ; ಹೆಂಗಸರನ್ನು ಮೆಟ್ಟಿ ಹೇಗೆ ಹೋಗೋದು; ಉಪಾಯವಿಲ್ಲ ಹಿಂತೆರಳಲೇ ಬೇಕು. (ಹಿಂತೆರಳಲು ಉದ್ಯುಕ್ತರಾಗುವರು. ಅಷ್ಟರಲ್ಲಿ ಮುದ್ದ-ಬಸಪ್ಪರೆಂಬ ಕೂಲಿಯವರು ಪ್ರವೇಶಿಸುವರು. ರಾಧೆಯೂ ಗೌರಿಯೂ ಎದ್ದು ನಿಂತು ನಮಸ್ಕರಿಸಿ)

**ರಾಧ:**-ದಯುವಿಟ್ಟು ಕೆಲಸಕ್ಕೆ ಹೋಗಬೇಡಿ (ಕೂಲಿಯವರು ಮುಂದುವರಿಯುವರು; ರಾಧೆಯು ಅಡ್ಡ ಮಲಗುವಳು.)

**ಬಸವ:**— ಹ್ಯಾಗೆ ಹೋಗುವುದೋ ಒಳಗೆ?

**ಮುದ್ದ:**—ಅವಳನ್ನು ಮೆಟ್ಟಿ ಹೋಗೋದು. ಹೆಂಗಸೆಂದು ಹಿಂಜರಿದರೆ ನಾವು ಒಳಗೆ ಹೋಗಲು ಸಾಧ್ಯವೇ ಇಲ್ಲ.

**ಬಸವ:** – ಹೆಂಗಸರನ್ನು ಕಾಲಿಂದ ತುಳಿಯಲು ನನ್ನ ಮನಸ್ಸು ಒಪ್ಪೋದಿಲ್ಲ.

**ಮುದ್ದ:**—ಮನಸ್ಸು ಒಪ್ಪುವುದಿಲ್ಲ? ಮೆನೆಜರನು ಶರಾಬು ಕುಡಿಯಲು ಒಂದು ರೂಪಾಯಿ ಕೊಟ್ಟದ್ದು ಯಾಕೆ ತಗೊಂಡಿ?

**ಬಸವ:**—ಆ ರೂಪಾಯಿಯೂ ಬೇಡ; ಈ ಬಲತ್ಕಾರವೂ ಬೇಡ.

**ಮುದ್ದ:**— ಸಾಕು ನಿನ್ನ ಶಾಸ್ತ್ರ; ನಡೆ ಮಗನೆ, ಮೆನೆಜರನ ಮುಂದೆ ಶರಾಬು ಕುಡಿದು ಜಂಬ ಕೊಚ್ಚಿದಿ. ಬಾ (**ಅವನನ್ನು ಎಳೆದುಕೊಂಡು ರಾಧೆಯನ್ನು ಮೆಟ್ಟಿ ಗೇಟಿನೊಳಗೆ ಹೋಗುವರು.**)

**ಕೇಚ:**—(**ಇದನ್ನು ನೋಡಿ ಖೇದಗೊಂಡು**) ದೇವಾ ಈ ಗಿರಣಿಯಲ್ಲಿ ಕೆಲಸ ಮಾಡುವುದಕ್ಕಿಂತ ಉಪವಾಸ ಬಿದ್ದು ಸಾಯುವುದು ಮೇಲು. ಸೆರೆಕುಡಿಸಿ, ಈ ಅತ್ಯಾಚಾರ ಮಾಡಿಸುತ್ತಾನಲ್ಲಾ ಮೆನೇಜರ. ಇವನ ಮನೆ ಹಾಳಾಗಲಿ ದೇವರೆ. ನಮ್ಮಾ ಪ್ರಾಣ ಹೋದರೂ ನಮಗೆ ಈ ಗಿರಣೀ ಕೆಲಸ ಬೇಡ (**ನರ್ಸನನ್ನು ಎಳಕೊಂಡು ಹಿಂತಿರುಗವನು. ಅಷ್ಟರಲ್ಲಿ ಮೆನೆಜರ್ ಮಹೇಂದ್ರನು ಪ್ರವೇಶಿಸಿ, ಪಹರೆಗೆ ನಿಂತಿರುವುದನ್ನು ನೋಡಿ**)

**ಮಹೇಂದ್ರ:**— ಬೊಡ್ಡೀ ಮಕ್ಕಳೇ, ಏನು ಪಹರೆ ಮಾಡುವಿರಾ! ಇಲ್ಲಿಂದ ಹೋಗುವಿರೊ ಕೂದಲು ಹಿಡಿದು ಎಳೆಯಲೊ. ಈ ಗಿರಣಿಯೇನು ನಿಮ್ಮ ಗಂಡನದೆಂದು ತಿಳಕೊಂಡಿರೊ? (**ಅಷ್ಟರಲ್ಲಿ ಮುಕ್ತಾಬಾಯಿಯು ಅಲಂಕಾರ ರಹಿತವಾಗಿ ಹತ್ತಿಯ ಸಾದಾ ಸೀರೆಯುಲ್ಲಿ ಪ್ರವೇಶಿಸಿ ರಾಧೆಯ ಬಳಿ ನಿಂತು**)

**ಮುಕ್ತಾ:**—ಗಿರಣಿಯು ನನ್ನ ಗಂಡನದು. ಕೂದಲು ಹಿಡಿದು ಎಳೆಯುವಿಯೊ? ಬಾ, ನಾನು ಪಹರೆಗೆ ನಿಲ್ಲುವೆನು.

**ಮಹೇಂದ್ರ:**—(**ಹೆದರಿ**) ಮುಕ್ತಾಬಾಯಿಯವರೇ ನೀವೊ? ಕೂದಲು ಹಿಡಿದು ಎಳೆಯುವೆನೆಂದು ನಾನು ನಿಮ್ಮನ್ನು ಉದ್ದೇಶಿಸಿ ಹೇಳಿದ್ದಲ್ಲ.

ನಾನು ನಿಮ್ಮ ಅಡಿಯಾಳು. ಈ ಹೇಗುಸರು ಗಿರಣಿ ಕೆಲಸಕ್ಕೆ ಬರುವವರನ್ನೆಲ್ಲಾ ತಡೆಯುತ್ತಾರೆ. ಏಳು ದಿವಸವಾಯಿತು; ಕೆಲಸ ನಿಂತಿದೆ. ಧನಿಗಳ ಸೇವಕನಾದ ನಾನು ಇವರ ಸೊಕ್ಕನ್ನು ಮುರಿಯಲೇಬೇಕು.

**ಮುಕ್ತಾ:**— ಮುಖರ್ಾ ಬಾಯಿಮುಚ್ಚು. ಅಗತ್ಯಬಿದ್ದರೆ ಕೆಲಸಕ್ಕೆ ಯಾರೂ ಹೋಗದಂತೆ ನಾನು ಪಹರೆಗೆ ನಿಲ್ಲುವೆನು.

**ಮಹೇಂದ್ರ:**— ಏನಿದು ಬಾಯಿಯುವರೇ? ಇವರು ನಿಮ್ಮ ಪತಿಯುವರಿಗೆ ವಿರೋಧವಾಗಿ ಮುಷ್ಕರವೆಬ್ಬಿಸಿರುವರೆಂಬುದನ್ನು ತಿಳಿದಿಲ್ಲವೆ? ನನಗೇನು; ಈ ಮುಷ್ಕರವು ಜಯಶೀಲವಾದರೆ ನಿಮ್ಮ ಗಿರಣಿಯ ವ್ಯಾಪಾರವೆಲ್ಲಾ ನಿಂತುಹೋಗಿ ನಿಮಗೆನೇ ನಷ್ಟವಾಗುವುದು. ನಿಮ್ಮ ಪತಿಯುವರು ಇಂದೇ ಬರುವರು. ಅವರಿಗೆ ಏನೂ ತಿಳಿಸದೆ ನೀವು ಈ ರೀತಿ ಮಾಡುವುದೆ?

**ಮುಕ್ತಾ:**— ಗಂಡಹೆಂಡಿರ ವ್ಯವಹಾರದಲ್ಲಿ ನೀನು ಕೈಹಾಕಬೇಕಾಗಿಲ್ಲ. ನಮ್ಮ ಲಾಭನಷ್ಟ ನಮಗೆ ತಿಳಿದಿದೆ.

**ಮಹೇಂದ್ರ:**— ನನಗೇನು? ನಾನು ನಡೆದ ಸಂಗತಿಯನ್ನೆಲ್ಲಾ ಧನಿಗೆ ತಿಳಿಸುವೆನು.

**ಮುಕ್ತಾ:**— ತಿಳಿಸು ನಡೆ. (ಹೋಗುವಳು. ಮಹೇಂದ್ರನು ಆಕೆಯನ್ನು ಕೊಂಚ ಹೊತ್ತು ನೋಡುತಿದ್ದು)

**ಮಹೇಂದ್ರ:**— ಹೆಂಡತಿಯನ್ನು ಬಹಳ ಮೇಲಿಟ್ಟರೆ ಆಗುವ ಗತಿ ಇದೇ. ಜಗಜೀವನರಾಯರು ಈಗ ಏನು ಮಾಡುವರೋ ನೋಡುವೆನು (ಹೋಗುವನು)

---

## ೪. ಮಾರ್ಗ.

(ಕೂಲಿಕಾರರ ಪ್ರವೇಶ)

**ಬೀರ:**— ಹೌದೇನೋ, ನಾವೆಲ್ಲ ಮುಷ್ಕರ ಮುಷ್ಕರ ಅಂತ ಉಪವಾಸ ಕೂತಿರುವುದು. ಒಬ್ಬೊಬ್ಬರೇ ಸದ್ದಿಲ್ಲದೆ ಕೆಲಸಕ್ಕೆ ಹೊಗುತ್ತಾರಂತೆ.

ನಾವು ಮಾತ್ರ ಡೌಲು ಮಾಡಿ ಕೂತರೆ ನಮ್ಮನ್ನು ನೌಕರಿಯಿಂದ ತೆಗೆದು ಬಿಡುತ್ತಾರೆ. ಮತ್ತೆ ನಾವೇನು ಮಾಡೋದು?

**ಕೇಚ**:—ಯಾರು ಹೇಳಿದ್ದಪ್ಪ ನಿನಗೆ, ಕೆಲಸಕ್ಕೆ ಹೋಗುತ್ತಾರಂತ?

**ಬೀರ**:—ಯಾರು ಹೇಳೋದು? ನಮ್ಮ ಧನಿ ಬೆಂಗಳೂರಲ್ಲಿದ್ದಾರಲ್ಲ, ಅವರಿಗೆ ನಮ್ಮ ಮೆನೇಜರರು ತಂತಿ ಬಿಟ್ಟಿದ್ದಾರಂತೆ, ಅರ್ಧ ಜನರು ಈಗಾಗಲೇ ಕೆಲಸಕ್ಕೆ ಬಂದರೂ ಅಂತ.

**ಕೇಚ**:—ಅವರು ಸುಳ್ಳೇ ತಂತಿ ಬಿಟ್ಟಿರಬೇಕು.

**ಬೀರ**:—ಸುಳ್ಳೇ ಬಿಟ್ಟಿರಬೇಕು! ಬಹಳ ಬುದ್ಧಿವಂತ ನೀನು. ಯಾಕೆ ಅವರು ಸುಳ್ಳು ತಂತಿ ಬಿಡೋದು? ಅದೂ ಅಲ್ಲದೆ ಮುಂಬಾಯಿಯಿಂದ ಕೆಲಸಕ್ಕೆ ಜನ ತರಿಸುತ್ತಾರಂತೆ.

**ಮುದ್ದ**:—ನಿನ್ನೆ ಸಂಜೆ ರೈಲಿಗೆ ಬಂದರು, 200 ಜನ. ನಾನು ನೋಡಿದೆ. ನಾಳೆ ಕೆಲಸ ಸುರು ಆಗುತ್ತದಂತೆ. ನಾನು ಮೆನೇಜರರ ಕಾಲಿಗೆ ಬಿದ್ದು ನಾಳೆ ಕೆಲಸಕ್ಕೆ ಬರುತ್ತೇನೆಂತೆ ಹೇಳಿದೆ. ನಾವೆಲ್ಲ ಹಾಗೆ ಮಾಡುವುದೇ ಒಳ್ಳೇದು.

**ಬಸವ**:—ನೀನು ಹೇಳೋದು ಸರಿ. ನಾನು ಹಾಗೆಯೇ ಮಾಡುತ್ತೇನೆ.

(ಅಷ್ಟರಲ್ಲಿ ರಂಗನು ಪ್ರವೇಶಿಸುವನು)

**ರಂಗ**:—ಏನು ನಡಿಸಿದ್ದೀರಿ ಇಲ್ಲಿ?

**ಬೀರ**:—ಏನೂ ಇಲ್ಲ ರಂಗ, ಮುಂಬಯಿಂದ 200 ಜನ ತರಿಸಿದ್ದಾರಂತೆ ಮೆನೇಜರರು, ಗಿರಣಿ ಕೆಲಸಕ್ಕೆ. ನಮ್ಮ ಪೈಕಿ ಅರ್ಧಕ್ಕರ್ಧ ಜನ ಈಗಾಗಲೇ ಹೋದರಂತೆ ಕೆಲಸಕ್ಕೆ. ನಾವು ಮಾತ್ರ ಹೋಗದೆ ಕುಳಿತರೆ ನಮ್ಮ ಗತಿಯೇನು ನಾಳೆ?

**ರಂಗ**:—ಇದೆಲ್ಲಾ ಸುದ್ದಿ ಮೆನೇಜರರು ನಮ್ಮ ಧೈರ್ಯ ಕುಂದಿಸಲಿಕ್ಕಾಗಿ ಊರಲ್ಲೆಲ್ಲಾ ಹರಡಿಸುವುದು. 200 ಜನ ಬಂದುದನ್ನು ನೋಡಿದವರಾರು?

**ಬೀರ:**—(ಮುದ್ದನಿಗೆ ಬೆರಳು ತೋರಿಸಿ) ಇವನು ನೋಡಿದ್ದಾನಂತೆ.

**ರಂಗ:**—ಹೌದೇನೋ.

**ಮುದ್ದ:**—ಹೌದು. ನಿನ್ನೆ ಸಂಜೆಯ ಗಾಡಿಗೆ 200 ಜನರು ಬಂದರು.

**ರಂಗ:**—ಮೆನೇಜರ ಎಷ್ಟು ಹಣ ಕೊಟ್ಟಿದ್ದಾನೆ, ನಿನಗೆ ಈ ರೀತಿ ಸುಳ್ಳು ಸುದ್ಧಿ ಹರಡಿಸಲಿಕ್ಕೆ? ನಿನ್ನೆ 6 ಘಂಟೆಗೆ ಸೆರೆಕುಡಿದು ಬಿದ್ದಿದ್ದಿ ಗಿರಣಿಯ ಮುಂದೆ! ನಾನು ನೋಡಿದೆ. ರೈಲಿನಲ್ಲಿ 200 ಜನ ಬರುವುದನ್ನು ನೋಡಿದಿ ಅಲ್ಲವೇ? (ಕಿವಿ ಹಿಡಿದು) ಸತ್ಯ ಹೇಳು. ಈ ಸುದ್ಧಿ ಹಬ್ಬಿಸಲಿಕ್ಕೆ ಯಾರು ಹೇಳಿದರು?

**ಮುದ್ದ:**— ಅಯ್ಯೋ–ದಮ್ಮಯ್ಯ–ದಮ್ಮಯ್ಯ–ಅಯ್ಯೋ—

**ರಂಗ:**—ಸತ್ಯ ಹೇಳು. ಇಲ್ಲವಾದರೆ ನಿನ್ನ ಕಾಲು ಮುರಿದು ಹಾಕುತ್ತೇನೆ. ಹಿಡಿಯಿರೋ ಇವನನ್ನು.

**ಮುದ್ದ:**—ಬೇಡ, ಬೇಡ, ಹೇಳುತ್ತೇನೆ. ಮೆನೇಜರರು 8 ಆಣೆ ಕೊಟ್ಟರು. 'ಜನರೆಲ್ಲಾ ಕೆಲಸಕ್ಕೆ ಹೋಗುತ್ತಾರೆ, ಪರ ಊರಿನಿಂದ ಜನ ಬಂದಿದ್ದಾರೆ ಅಂತ ಹೇಳಿ ಜನರು ಕೆಲಸಕ್ಕೆ ಬರುವಂತೆ ಮಾಡಬೇಕು' ಅಂತ ಹೇಳಿದ್ರು. 'ಒಬ್ಬನನ್ನು ಕೆಲಸಕ್ಕೆ ತಂದ್ರೆ 2 ರೂಪಾಯಿ ಕೊಡುತ್ತೇನೆ' ಅಂತ ಹೇಳಿದ್ರು

**ರಂಗ:**—ನೋಡಿದಿರಾ? ಮೆನೇಜರರ ಕುತಂತ್ರಗಳು! ಎಂಟಾಣೆಗಾಗಿ ತಮ್ಮನ್ನೇ ಮಾರಿಕೊಳ್ಳುವ ಈ ಮುದ್ದನಂತವರ ಮಾತನ್ನು ನಂಬಿ ನಮ್ಮ ಒಕ್ಕಟ್ಟನ್ನು ನಾವೇ ಮುರಿಯಬಾರದು. ಮುಂಬಯಿಯಿಂದ ಇಲ್ಲಿಗೆ ಯಾರೂ ಬರುವಂತಿಲ್ಲ. ಬಂದರೂ 4 ದಿವಸ ನಿಂತಾರು. (ಮುದ್ದನನ್ನು ದೂಡಿ) ನಡಿ. ಇನ್ನು ಈ ರೀತಿ ಏನಾದರೂ ಸುದ್ದಿ ಹರಡಿಸಿದರೆ ಪ್ರಾಣ ಉಳಿಯಲಿಕ್ಕಿಲ್ಲ ತಿಳಿಯಿತೆ?

(ಹೋಗುವರು)

---

## ೫. ಜಗಜೀವನ ರಾಯನ ದಿವಾಣಖಾನೆ.

(ರಾಯರು ಗೂಢವಾದ ಆಲೋಚನೆಯಲ್ಲಿ ಬಿದ್ದಿರುವರು.)

**ಜಗಜೀವನ:**-(ತಾನಾಗಿಯೇ) ಇಲ್ಲಿಯ ಗಿರಣಿ ಮುಷ್ಕರದ ಪರಿಸ್ಥಿತಿಯನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಬೆಂಗಳೂರಿನಲ್ಲಿ ಕೂಡ ಮುಷ್ಕರವು ಹತ್ತು ದಿವಸಗಳಿಗಿಂತ ಹೆಚ್ಚು ಸಾಗಲಿಲ್ಲ. ಅಷ್ಟರೊಳಗೆನೇ ಕೂಲಿಯುವರ ಒಗ್ಗಟ್ಟು ಮುರಿದು ಉಪವಾಸದ ಭಯಂಕರ ಭವಿಷ್ಯವನ್ನು ಸಹಿಸಲಾರದೆ ಅರ್ಧಕ್ಕರ್ಧ ಜನರು ಕೆಲಸಕ್ಕೆ ಪುನಃ ಬಂದರು. ಆದರೆ, ಇಲ್ಲಿ ಮೆನೇಜರನು ಹೇಳುವ ಪ್ರಕಾರ ಒಬ್ಬನಾದರೂ ಕೆಲಸಕ್ಕೆ ಬರುವುದಿಲ್ಲ. ಕೂಲಿಕಾರರ ಹತ್ತಿರ ಒಂದು ವರ್ಷ ಕೆಲಸ ಮಾಡದಿದ್ದರೂ ಊಟ ಮಾಡುವಷ್ಟು ಹಣವಿದ್ದಂತೆ ತೋರುತ್ತದೆ. ಊರ ಜನರಾರಾದರೂ ಅವರಿಗೆ ಸಹಾಯ ಮಾಡುತ್ತಿರಬಹುದೆ? ಛೇ ಈ ಊರಿನ ಜನರೆ! ಬರೇ ಬಾಯಿಯಿಂದ ಸಹಾನುಭೂತಿ ತೋರಿಸುವದಲ್ಲದೆ ಕಷ್ಟ ಕಾಲದಲ್ಲಿ ಎಂದೂ ಸಹಾಯ ಮಾಡುವವರಲ್ಲ. ಬಿದ್ದವರ ತಲೆಯ ಮೇಲೆ ಕಲ್ಲು ಹಾಕಲು ಮುಂದೆ ಬಂದಾರು. ಹಾಗೆಂದ ಬಳಿಕ ಇವರಿಗೆ ಸಹಾಯ ಮಾಡುವವರಾದರೂ ಯಾರು? (ಮೌನವಾಗಿದ್ದು ಕಡೆಗೆ) ಮಹೇಂದ್ರನ ಮಾತು ನಿಜವಿರಬಹುದೆ; ಅದೂ ಅಸಾಧ್ಯ; ನೂರು ಗಜ ಹೋಗಬೇಕಾದರೆ ಮೋಟರ್ ತಾ ಎನ್ನುತ್ತಿದ್ದ ಮುಕ್ತೆಯು ಗಿರಣಿಯ ಬಾಗಿಲಲ್ಲಿ, ಬಿಸಿಲಲ್ಲಿ ನಿಂತು ಪಹರೆ ಮಾಡುತ್ತಿರುವಳೆಂದರೆ ನಂಬುವವರಾರು? ಅದಲ್ಲದೆ ನನಗೆ ವಿರೋಧವಾಗಿ ನನ್ನ ಮುಕ್ತೆಯು ಕೂಲಿಕಾರರಿಗೆ ಧನಸಹಾಯ ಮಾಡಿರುವಳಂತೆ. ಸುಳ್ಳು, ಶುದ್ಧ ಸುಳ್ಳು. ಬೆಂಗಳೂರಿನ ಜೋನ್ಸರಂತೆ ತನ್ನಿಂದ ಮುಷ್ಕರ ನಿಲ್ಲಿಸಲಿಕ್ಕೆ ಆಗಲಿಲ್ಲವೆಂದು, ಮಹೇಂದ್ರನು ತನ್ನ ಅಯೋಗ್ಯತೆಯನ್ನು ಮುಚ್ಚಲು ಈ ಅಬದ್ಧ ಸುದ್ಧಿಯನ್ನು ಹರಡಿಸಿರುವನು. (ಸ್ವಲ್ಪ ಆಲೋಚಿಸಿ) ಏನೇ ಇರಲಿ. 'ಅಂಗೈ ನೋಡಲು ಕನ್ನಡಿ ಏಕೆ?' ಬೇಂಕಿಗೆ ಜನ ಕಳುಹಿಸಿ, ಮುಕ್ತೆಯು ಹಣವನ್ನು 'ವಿದ್ ಡ್ರಾ' (with-draw) ಮಾಡಿರುವಳೊ ತಿಳಿಯುವೆನು. (ಸೇವಕನನ್ನು ಕರೆದು) ಛೋಕ್ರಾ ಈ ಚೀಟಿಯನ್ನು 'ಮಿಲ್ ಓನರ್ಸ್ ಬೇಂಕ್' (Mill Owners' Bank) ನಲ್ಲಿ ಕೊಟ್ಟು ಬೇಗನೇ ಉತ್ತರ ತಾ.

**ಸೇವಕ:**— ಅಪ್ಪಣೆ (ಹೋಗುವನು)

**ಜಗಜೀವನ:**—(ಸ್ವಗತ) ಮುಕ್ತೈಯು ಎಲ್ಲಿಗೆ ಹೋಗಿರುವಳು? ನಾನು ಬಂದು ಇಷ್ಟು ಹೊತ್ತಾದರೂ ಆಕೆಯ ಸುಳಿವಿಲ್ಲ. ಸೇವಕರೊಡನೆ ಕೇಳಿದರೆ ಪ್ರತಿಯೊಬ್ಬರೂ ತನಗೆ ಗೊತ್ತಿಲ್ಲವೆನ್ನುತ್ತಾರೆ. ಎಲ್ಲವೂ ವಿಪರೀತಾವಸ್ಥೆಯೆ, ಏನೆಂದು ಒಂದೂ ತಿಳಿಯುವುದಿಲ್ಲ.

**(ಮುಕ್ತೈಯು ಆಭರಣ ರಹಿತಳಾಗಿ ಸಾದಾ ಸೀರೆಯನ್ನುಟ್ಟುಕೊಂಡು ಬರುವಳು)**

**ಜಗಜೀವನ:**—(ಆಕೆಯನ್ನು ಕಂಡು) ಮುಕ್ತಾ, ಎಲ್ಲಿಗೆ ಹೋಗಿದ್ದೆ? ಗಿರಣಿಯ ಮುಷ್ಕರದ ಪ್ರಕರಣದಲ್ಲಿ ಕೈಹಾಕುವ ಮೊದಲು ನಿನ್ನನ್ನೊಮ್ಮೆ ನೋಡಿ ಹೋಗಬೇಕೆಂದು ರೈಲಿನಿಂದ ಇಳಿದವನೇ ಇಲ್ಲಿಗೆ ಬಂದೆ. **(ಮುಕ್ತೈಯು ಮಾತಾಡದೆ ಸುಮ್ಮನಿರುವಳು. ಜಗಜೀವನನು ಅವಳ ಬಳಿಗೆ ಹೋಗಿ ಭುಜದ ಮೇಲೆ ಕೈ ಇಡುವನು; ಅಗ ಆಕೆಯು ಉಟ್ಟ ಹತ್ತಿ ಸೀರೆಯನ್ನೂ ಆಭರಣ ರಹಿತ ದೇಹವನ್ನೂ ನೋಡಿ ಆಶ್ಚರ್ಯದಿಂದ)**-- ಮುಕ್ತಾ ಇದೇನು! ನಿನ್ನ ಒಡವೆಗಳೆಲ್ಲಿ? ಕೂಲಿಯವರಂತೆ ಈ ಹತ್ತಿಯ ಬಿಳೀ ಸೀರೆಯನ್ನೇಕೆ ಉಟ್ಟಿರುವೆ?

**ಮುಕ್ತಾ:**—**(ಮೋರೆಯನ್ನು ತಿರುಗಿಸಿ)** ಪರಮಾತ್ಮನ ಸೃಷ್ಟಿಯಲ್ಲಿ ಬಡವರೂ ಧನಿಕರೂ ಸಮಾನರೆಂಬುದನ್ನು ತೋರಿಸುವುದಕ್ಕಾಗಿ.

**ಜಗಜೀವನ:**—(ಆಶ್ಚರ್ಯದಿಂದ) ನಿನ್ನ ಮಾತು ಕೇಳುವಾಗ ಸೋಜಿಗವೆನಿಸುವುದು. ಈ ಸಮತಾವಾದದ ತತ್ವವನ್ನು ಯಾವಾಗ ಕಲಿತೆ?

**ಮುಕ್ತಾ:**— ನಾನು ಕಲಿತುದಷ್ಟೇ ಅಲ್ಲ, ನಿಮಗೂ ಕಲಿಸಬೇಕೆಂದಿರುವೆನು.

**ಜಗಜೀವನ:**— ಏನನ್ನು?

**ಮುಕ್ತಾ:**— ಬಡವರು ದುಡಿದ ಹಣದಲ್ಲಿ ನ್ಯಾಯವಾದ ಅಂಶವನ್ನು ಅವರಿಗೆ ಕೊಡದೆ ಅವರನ್ನು ಸುಲಿಯುವವರು ದರೋಡೆಕೋರರೆಂಬುದನ್ನು.

**ಜಗಜೀವನ:**—(ಅಪಹಾಸ್ಯದ ನಗುವನ್ನು ನಕ್ಕು) ಓ ಹೋ ! ತಿಳಿಯಿತು. ಕೂಲಿ ಮಕ್ಕಳ ಕಷ್ಟದಲ್ಲಿ ಸಹಾನುಭೂತಿ ತೋರಿಸಲು ಈ ವೇಷಮಾಡಿಕೊಂಡಿರುವೆಯಾ?

**ಮುಕ್ತಾ:**—(ಸಿಡುಕಿನಿಂದ) ವೇಷ! ಈ ಸೀರೆ ಎಲ್ಲಿಯದೆಂದು ಬಲ್ಲಿರಾ? ಇದು ನಿಮ್ಮ ಗಿರಣಿಯಲ್ಲೇ ತಯಾರಾದುದು. ನಿಮ್ಮ ಗಿರಣಿಯ ಸೀರೆಯನ್ನು ಉಡುವುದು ವೇಷವೆ? ಜನರು ಈ ತರದ ವೇಷ ಮಾಡುತ್ತಾರಾದ್ದರಿಂದಲೇ ನಿಮಗೆ ಲಾಭ ದೊರೆತು ನೀವು ಈ ಯುರೋಪಿಯಾನರ ಸೋಗು ಹಾಕಿಕೊಳ್ಳುವುದು. (ಅಷ್ಟರಲ್ಲಿ ಹುಡುಗನು ಬ್ಯಾಂಕಿನಿಂದ ಕಾಗದವನ್ನು ತಂದು ರಾಯರ ಕೈಯಲ್ಲಿ ಕೊಟ್ಟು ನಮಸ್ಕಾರ ಮಾಡಿ ಹೋಗುವನು. ಜಗಜೀವನನು ಅದನ್ನು ಒಡೆದು ಓದಿ.)

**ಜಗಜೀವನ:**—(ತೀಕ್ಷ್ಣ ದನಿಯಿಂದ) ಮುಕ್ತಾ, ಇದನ್ನು ನೋಡು. ನೀನು ಬೇಂಕಿನಿಂದ 500 ರೂಪಾಯಿಗಳನ್ನು ವಿದ್-ಡ್ರೋ ಮಾಡಿರುವಿಯಂತೆ. ಅದನ್ನೇನು ಮಾಡಿದೆ?

**ಮುಕ್ತಾ:**—(ಒಯ್ಯಾರದಿಂದ ರಾಯರ ಬಳಿಗೆ ಬಂದು) ನಾಥಾ; ಈ ಮೊದಲು ನಾನೆಷ್ಟೋ ಸಲ ಸಾವಿರ ಸಾವಿರ ರೂಪಾಯಿಗಳನ್ನೇ ತೆಗೆದಿರುವೆನಲ್ಲಾ. ನೀವು ಒಮ್ಮೆಯೂ 'ಅದನ್ನು ಏನು ಮಾಡಿದೆ ಎಂದು ನನ್ನೊಡನೆ ಕೇಳಿದ್ದಿಲ್ಲ. ಇಂದು ಕೇಳಲು ಕಾರಣವೇನು?

**ಜಗಜೀವನ:**—(ಕೋಪದಿಂದ) ಕಾರಣ ಹೇಳುವೆನು ಅಗತ್ಯವಿದ್ದಾಗ. ಆ ಹಣವನ್ನೇನು ಮಾಡಿದೆ? ಬೇಗನೆ ಹೇಳು.

**ಮುಕ್ತಾ:**—(ಜಗಜೀವನನ ಕೆನ್ನೆಯನ್ನು ಸವರಿ, ಮುಗುಳು ನಗುತ್ತಾ) ಇಷ್ಟು ಕೋಪವೇಕೆ? 500 ರೂಪಾಯಿಯನ್ನು ಉಪವಾಸ ಬಿದ್ದ ನಮ್ಮ ಕೂಲಿಕಾರರ ಹೆಂಡಿರು ಮಕ್ಕಳಿಗೆ ಕೊಟ್ಟೆ.

**ಜಗಜೀವನ:**—(ಆಕೆಯನ್ನು ದೂಡಿ, ತಿರಸ್ಕಾರದಿಂದ) ಉಪವಾಸ ಬಿದ್ದ ಕೂಲಿಕಾರರ ಹೆಂಡಿರು ಮಕ್ಕಳಿಗೆ ಕೊಟ್ಟೆ. ಮತ್ತು ನೀನು, ಗಿರಣಿಗೆ ಯಾರೂ ಹೋಗದಂತೆ ಪಹರೆ ಮಾಡಲು ಹೋಗಿದ್ದೆ, ಅಲ್ಲವೆ? ಮುಕ್ತಾ, ನೀನು ಯಾರೆಂಬುದನ್ನು ಮರೆತೆಯಾ?

**ಮುಕ್ತಾ**:—(ಗಟ್ಟಿ ಮನಸ್ಸು ಮಾಡಿಕೊಂಡು) ಎಂದೂ ಮರೆತಿಲ್ಲ. ನಾನು ನಿಮ್ಮ ಪತ್ನಿಯಾದರೂ, ಭರತ ಭೂಮಿಯಲ್ಲಿ ಹುಟ್ಟಿದ ಒಬ್ಬ ಸ್ತ್ರೀ. ಭರತ ಮಾತೆಯ ಬಡ ಮಕ್ಕಳು ಕಷ್ಟದಲ್ಲಿರುವಾಗ ಸಹಾಯ ಮಾಡುವುದು ನನ್ನ ಕರ್ತವ್ಯ. ಇದನ್ನು ನಾನು ಎಂದೂ ಮರೆತಿಲ್ಲ.

**ಜಗಜೀವನ**:—ಸಾಕು ನಿನ್ನ ಸಿದ್ಧಾಂತ. ಗಿರಣಿ ಮಾಲಕರೆಲ್ಲಾ ನನ್ನನ್ನು ನೋಡಿ ನಗುವಂತೆ ಮಾಡಿದೆ. ಗಿರಣಿ ಶಿಸ್ತನ್ನು ಪಾಲಿಸುವುದರಲ್ಲಿ ನಮ್ಮ ಗಿರಣಿಯು ಈ ತನಕ ಇತರರಿಗೆ ಮಾದರಿಯಾಗಿತ್ತು. ಕೂಲಿಕಾರರ ಪಿಕಲಾಟಕ್ಕೆ ನಮ್ಮ ಗಿರಣಿಯಲ್ಲಿ ಈ ವರೆಗೆ ಎಳ್ಳಷ್ಟು ಎಡೆ ಕೊಟ್ಟದ್ದಿಲ್ಲ. ಆದರೆ ಈಗ ನಮ್ಮ ಮನೆಯಲ್ಲೆ ನನ್ನ ಹೆಸರಿಗೆ ಕೊಡಲಿ. ಮುಕ್ತಾ; ನಿನ್ನನ್ನು ನಾನು ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸಿದ್ದಕ್ಕೆ ಇದೆಯೇನು ನಿನ್ನ ಪ್ರತ್ಯುಪಕಾರ? ನನ್ನಲ್ಲಿ ನಿನಗಿದ್ದ ಪ್ರೇಮವು ಯಥಾರ್ಥವಾದುದಲ್ಲ. ಬರೀ ನಾಟಕೀ ಪ್ರೇಮ.

**ಮುಕ್ತಾ**:—(ಬಳಿಗೆ ಬಂದು ಕೈಹಿಡಿಯಲೆತ್ನಿಸುವಳು. ಜಗಜೀವನನು ಕೈ ಹಿಂದಕ್ಕೆಳೆಯುವನು) ನಾಥಾ ನಿಮ್ಮ ಮೇಲೆ ನನ್ನ ಪ್ರೇಮವು ನಿಷ್ಕಳಂಕ ವಾದುದರಿಂದಲೇ ನಾನು ಈ ಕಾರ್ಯಕ್ಕೆ ಕೈ ಹಾಕಿದೆನು. ಪತಿಯನ್ನು ಸನ್ಮಾರ್ಗಕ್ಕೆ ತರುವುದು, ಪವಿತ್ರ ಪ್ರೇಮದಿಂದ ಪ್ರೇರಿತಳಾದ ಪ್ರತಿಯೊಬ್ಬ ಪತ್ನಿಯ ಕರ್ತವ್ಯವು. ನಾನು ನಿಮ್ಮ ಹೆಸರಿಗೆ ಕೊಡಲಿ ಇಟ್ಟಿಲ್ಲ 'ಬಡವರ ರಕ್ತಹೀರುವ ರಾಕ್ಷಸ'ನೆಂಬ ನಿಮ್ಮ ಅಪಕೀರ್ತಿಯ ಬದಲು 'ಬಡವರ ತಂದೆ' ಎಂಬ ಪವಿತ್ರ ನಾಮ ಉಂಟಾಗಲೆಂದು ಪ್ರಯತ್ನಿಸಿದೆನು. ನಾಥಾ, (ಕಾಲಿಗೆ ಬಿದ್ದು) ನಮ್ಮ ಈ ವರೆಗಿನ ಪ್ರೇಮಮಯ ಜೀವನದ ಹೆಸರಲ್ಲಿ ನಿಮ್ಮನ್ನು ಬೇಡಿಕೊಳ್ಳುವೆನು. ಬಡವರ ಗೋಳಿಗೆ ಹೊಣೆಯಾಗ ಬೇಡಿರಿ.

**ಜಗಜೀವನ**:—ಪ್ರೇಮದ ಮಾತೆತ್ತಬೇಡ. ಕೂಲಿಕಾರರ ಬೇಡಿಕೆ ಗಳನ್ನು ಮನ್ನಿಸುವುದೆಂದರೆ ಗಿರಣಿಯನ್ನು ಕೂಲಿಕಾರರಿಗೆ ಒಪ್ಪಿಸಿದಂತೆಯೇ ಸರಿ. 'ಮಿಲ್ ಓನರ್ಸ್ ಎಸೋಸಿಯೇಶನಿನ' ಅಧ್ಯಕ್ಷನಾದ ನಾನು ಎಲ್ಲಾ ಗಿರಣೀ ಮಾಲಕರ ಹಿತವನ್ನು ಸಾಧಿಸಬೇಕು. ಮುಷ್ಕರದ ಯುಗವು ಆರಂಭವಾಗಿದೆ. ಇದರಲ್ಲಿ ಸೋಲು ನಮಗೋ ಕೂಲಿಯವರಿಗೋ

ಎಂಬುದು ನನ್ನ ಗಿರಣಿಯಲ್ಲೇ ನಿರ್ಧಾರವಾಗಲಿ. ನನ್ನಲ್ಲಿ ಪ್ರಾಣವಿರುವ ತನಕ ಈ ಮುಷ್ಕರವನ್ನು ವಿರೋಧಿಸುವೆನು. ಈ ಕುನ್ನೀಮಕ್ಕಳು ಎಷ್ಟು ದಿನ ನನ್ನನ್ನು ಎದುರಿಸುವರೋ ನೋಡೋಣ. ಮುಕ್ತಾ, ನೀನು, ನಿನಗೆ ಏನೂ ತಿಳಿಯದ ಈ ಗಿರಣೀ ಪ್ರಕರಣದಲ್ಲಿ ಪ್ರವೇಶಿಸಬೇಡ.

**ಮುಕ್ತಾ:**—ಪ್ರೇಮಕ್ಕಿಂತಲೂ ಕರ್ತವ್ಯ ಶ್ರೇಷ್ಠ

**ಜಗಜೀವನ:**—ಹಾಗಾದರೆ ನಿನ್ನ ಕರ್ತವ್ಯ ಮಾಡು; ನಡೆ. ನಿನ್ನ ಆಭರಣಗಳನ್ನೆಲ್ಲಾ ಬೀಗ ಮುದ್ರೆ ಮಾಡಿಡುವೆನು. ಬ್ಯಾಂಕಿನಿಂದ ನಿನಗೆ ಒಂದು ಚಿಕ್ಕಾಸೂ ಸಿಗದಂತೆ ವ್ಯವಸ್ಥೆ ಮಾಡುವೆನು. ಈ ನಾಯಿಗಳಿಗೆ ಹೇಗೆ ಸಹಾಯ ಮಾಡುವಿಯೋ ನೋಡುತ್ತೇನೆ. (ಅಷ್ಟರಲ್ಲಿ ಸೇವಕನು ಒಳ ಪ್ರವೇಶಿಸಿ)

**ಸೇವಕ:**—ಅಮ್ಮನವರೇ ಸುದರ್ಶನನು ನಿಮ್ಮ ಭೆಟ್ಟಿಗಾಗಿ ಬಂದಿರುವನು, ಒಳಗೆ ಕರೆಯಲೇ?

**ಮುಕ್ತಾ:**—ಕರಿ.

**ಜಗಜೀವನ:**—ಸುದರ್ಶನ! ಈತನನ್ನು ಜೈಲಿನಿಂದ ಯಾರು ಬಿಡಿಸಿದರು?

**ಮುಕ್ತಾ:**—ಸುಳ್ಳು ಆರೋಪದ ಮೇಲೆ ಬಂಧಿಸಲ್ಪಟ್ಟ ಲಕ್ಷ್ಮಣ-ಸುದರ್ಶನರನ್ನು ಖಟ್ಲೆ ತೀರುವ ವರೆಗೆ ಜಾಮೀನಿನಲ್ಲಿ ಬಿಡಿಸುವ ಏರ್ಪಾಡು ಮಾಡಿದೆ ನಾನು.

(ಸುದರ್ಶನನು ಬಂದು ವಂದಿಸುವನು)

**ಮುಕ್ತಾ:**—ಸುದರ್ಶನಾ ಲಕ್ಷ್ಮಣನೆಲ್ಲಿ?

**ಸುದರ್ಶನ:**—ತಾಯಿಯವರೇ, ಲಕ್ಷ್ಮಣನು, ಮುಷ್ಕರವು ಅಂತ್ಯವಾಗುವ ತನಕ ತಾನು ಇತರರ ಸಹಾಯದಿಂದ ಹೊರಗೆ ಬರುವುದಿಲ್ಲವೆಂದನು; ನಾನೆಷ್ಟು ಹೇಳಿದರೂ ಕೇಳಲಿಲ್ಲ. ತಮ್ಮ ಮನ ನೋಯಿಸಬಾರದೆಂದು ನಾನು ಜಾಮೀನಿಗೆ ಒಪ್ಪಿ ಹೊರಗೆ ಬಂದೆನು.

**ಜಗಜೀವನ:**—ಸುದರ್ಶನಾ, ಹೊಟ್ಟೆಗಿಲ್ಲದೆ ಅಡ್ಡಾಡುತ್ತಿದ್ದಾಗ ನಿನಗೆ ಕೆಲಸ ಕೊಟ್ಟದ್ದಕ್ಕಾಗಿ ಉಂಡ ಮನೆಗೆ ಎರಡು ಬಗೆದೆ. ಇಂಥಾ ಸ್ವಾಮಿದ್ರೋಹವು ನಿನಗೆ ಸರಿದೋರುವುದೇ?

**ಸುದರ್ಶನ:**—ಇದು ಸ್ವಾಮಿ ದ್ರೋಹವಲ್ಲ. ಬಹುಕಾಲದಿಂದ ಮಾಲಕರಿಂದ ಸಿಗುತ್ತಿರುವ ಕಷ್ಟ ಪೀಡೆ ಅನ್ಯಾಯಗಳು ಮನಸ್ಸನ್ನು ಇರಿಯುತ್ತಿದ್ದು ಅದರಿಂದಾಗಿ ದುಃಖಗೊಂಡ ಹೃದಯದಲ್ಲಿ ಹುಟ್ಟಿದ ಜಾಗ್ರತಿಯ ಫಲ.

**ಜಗಜೀವನ:**—ಹೊಟ್ಟೆಯಲ್ಲಿ ಉಪವಾಸದ ಬೆಂಕಿಯು ಬೇಗೆ ಯೆದ್ದಾಗ ನಿಮ್ಮ ಜಾಗ್ರತಿಯು ಎಷ್ಟು ದಿನ ನಿಲ್ಲುವುದೋ ನೋಡುವೆನು.

**ಸುದರ್ಶನ:**—ರಾಯರೆ, ಆ ಆಶೆ ಬಿಟ್ಟು ಬಿಡಿ. ಪ್ರಾಣ ಹೋದರೂ ನಾವು ಈಸಾರೆ ನಿಮಗೆ ಬಗ್ಗುವವರಲ್ಲ.

**ಜಗಜೀವನ:**—(ಹುಸಿ ನಕ್ಕು) ಒಹೋ, ಇಂಥಾ ಮಾತನ್ನು ಹಲವು ಬಾರಿ ಕೇಳಿರುವೆನು. ಮುಷ್ಕರದ ಅನುಭವವು ನನಗೆ ಇದು ಪ್ರಥಮ ದಲ್ಲ.

**ಸುದರ್ಶನ:**—ಆ ಅನುಭವವು ಈಸಾರೆ ಉಪಯೋಗಕ್ಕೆ ಬೀಳಲಿ ಕ್ಕಿಲ್ಲ. ನ್ಯಾಯವಾದ ನಮ್ಮ ಬೇಡಿಕೆಗಳನ್ನು ಒಪ್ಪಿಕೊಂಡರೆ ಉತ್ತಮ. ಇಲ್ಲವಾದರೆ ನಾವಂತೂ ಸಾಯಲಿಕ್ಕೇ ಹೊರಟವರು. ಗಿರಣಿ ಕೆಲಸ ನಿಂತು ನಿಮ್ಮ ವ್ಯಾಪಾರ ಕೆಟ್ಟುಹೋಗಿ ನಿಮ್ಮ ಗತಿಯೇನಾಗುವುದೆಂಬುದನ್ನು ಸ್ವಲ್ಪ ವಿಚಾರ ಮಾಡಿರಿ.

**ಜಗಜೀವನ:**—ಮೊದಲು ಮುಷ್ಕರ ನಿಲ್ಲಿಸಿರಿ. ನಂತರ ಸವಲತು ಕೊಡುವ ವಿಚಾರ ಮಾಡೋಣಾದೀತು.

**ಸುದರ್ಶನ:**—ದುಃಖ ನಿವಾರಣೆಯಾಗುವ ಮೊದಲು ಮುಷ್ಕರ ನಿಲ್ಲಿಸಲು ಸಾಧ್ಯವಿಲ್ಲ. ರಾಯರೆ; ಇಷ್ಟು ಜನರನ್ನು ಉಪವಾಸ ಹಾಕಿ ಕೊಂದ ಪಾಪಕ್ಕೆ ಗುರಿಯಾಗುವಿರಿ.



ಜಗ:—ಪ್ರಾಣಹೋದರೂ ಕೂಲಿಕಾರರ ಬೇಡಿಕೆಗಳನ್ನು ಮನ್ನಿಸಲಾರೆನು.

**ಜಗಜೀವನ:**—ಪಾಪದ ಹೆದರಿಕೆಯನ್ನು ಸುಮ್ಮನೆ ಹಾಕ ಬೇಡ. ನಾನು ಪಾಪಕ್ಕೆ ಹೆದರುವವನಲ್ಲ. ನಿಮ್ಮ ಪ್ರಾಣ ಉಳಿಸುವುದಕ್ಕಾಗಿ ನಾನು ಗಿರಣೀ ಮಾಲಕರ ಹಿತವನ್ನು ಮೂಲೆಗೊತ್ತುವೆನೆಂದು ತಿಳಿದೆಯೊ? ಇದು ಕೊನೆಯ ಯುದ್ಧ! ಗಿರಣೀ ಮಾಲಕರ ಮುಂದಾಳಾದ ಜಗಜೀವನನು ಎಂದೂ ಕೂಲಿಕಾರರಿಗೆ ಬಗ್ಗುವವನಲ್ಲ. ಇದರಲ್ಲಿ ನಾನು ಪೂರ್ಣ ಜಯಶೀಲನಾಗಬೇಕು; ಇಲ್ಲವೆ ಪೂರ್ಣ ನಷ್ಟವಾಗಿ ನನ್ನ ಹೆಸರು ಅಳಿದು ಹೋಗಬೇಕು. 'ಗಿರಣೀ ಮಾಲಕರ ಭವಿತವ್ಯವು ಜಗಜೀವನರಾಯರ ಕೈಯಲ್ಲಿ ಸುರಕ್ಷಿತವಾಗಿದೆ' ಎಂಬುದನ್ನು ಈ ಮುಷ್ಕರದಲ್ಲಿ ಜಗತ್ತೇ ತಿಳಿಯಲಿ. ಈ ಮುಷ್ಕರದ ತೀರ್ಮಾನ—ನಿಮ್ಮ ಸಂಪೂರ್ಣ ಸೋಲಿನಲ್ಲಿ, ಅಥವಾ ನನ್ನ ಸಾವಿನಲ್ಲಿ. ಸುದರ್ಶನ, ನೀನು ಇನ್ನು ತೆರಳಬಹುದು. ನಮ್ಮ ಭವಿಷ್ಯವು ಈ ಯುದ್ಧದಲ್ಲಿ ನಿಶ್ಚಯವಾಗಲಿದೆ. ಜಗ್ಗು, ಜಗ್ಗು, ಹಗ್ಗವನ್ನು ಎಲ್ಲಿಯ ತನಕ ಜಗುವಿ.

**ಸುದರ್ಶನ:**—ನೀತಿ ಸಾಮ್ರಾಜ್ಯವು ಸ್ಥಾಪನೆಯಾಗಬೇಕಾದರೆ ಅನೇಕ ತರದ ಬಲಿಗಳು ಬೇಕಾಗುವುವು. ಇದು ನಮ್ಮಿಬ್ಬರ ಜಗಳವಲ್ಲ. ಧ್ಯೇಯಗಳ ಘರ್ಷಣೆ. ನಾವು ಸತ್ತರೂ ಅಥವಾ ನೀವು ಸೋತರೂ ಪರಿಣಾಮವು ನಮ್ಮ ದೇಶದ ಇತಿಹಾಸವನ್ನೇ ಬೇರೆ ಮಾಡುವುದು. ಧನದ ದಬ್ಬಾಳಿಕೆಯೋ—

**ಜಗಜೀವನ:**—ಕೂಲಿಕಾರರ ಕ್ರಾಂತಿಯೋ ಇದರಲ್ಲೇ ತೀರ್ಮಾನವಾಗಲಿ.

(ತೆರೆ ಬೀಳುವುದು)

**ತೃತೀಯಾಂಕ ಸಮಾಪ್ತಿಃ**

---

## ಚತುರ್ಥಾಂಕ

### ೧. ಮಾರ್ಗ

**(ಮುಷ್ಕರದ ಮೂರನೇ ವಾರ. ಮುಕ್ತೆಯಿಂದ ಸಿಗುತ್ತಿದ್ದ ಸಹಾಯವನ್ನು ಜಗಜೀವನನು ತಪ್ಪಿಸಿದ್ದರಿಂದ ಕೂಲಿಕಾರರಿಗೆ ಬೇರೆ ಊಟದ ವ್ಯವಸ್ಥೆ ಇಲ್ಲದೆ**

ಉಪವಾಸಕ್ಕಾರಂಭವಾಗಿರುವುದು. ಚಂಚಲ ಮನಸ್ಕನಾದ ಸಿದ್ದನು ಮುಷ್ಕರ ವನ್ನು ಮುರಿಯುವ ಆಲೋಚನೆಯುಳ್ಳವನಾಗಿ ಕೆಲವು ಕೂಲಿಕಾರರೊಂದಿಗೆ ಪ್ರವೇಶಿಸುವನು.)

**ಸಿದ್ದ**:— ನಾವು ಸತ್ತೆವು; ಮೂರು ದಿನಗಳಾದುವು; ಊಟವಿಲ್ಲ. ನಾನೀಗಲೇ ಹೋಗಿ ಯಜಮಾನರ ಕಾಲು ಹಿಡಿದು ಕೊಟ್ಟಷ್ಟು ಕೂಲಿಗೆ ಕೆಲಸ ಮಾಡುವೆನೆಂದು ಹೇಳಿ ಬಿಡುವೆನು; ಬುದ್ಧಿ ಹೇಳಲಿಕ್ಕೆ ಎಲ್ಲರೂ ಬರುತ್ತಾರೆ. ಊರಿನವರು ಸಭೆ ಮಾಡಿ 'ಗಿರಣಿ ಮಾಲಕರ ವರ್ತನವನ್ನು ಖಂಡಿಸುತ್ತೇವೆ; ಮುಷ್ಕರ ಹಿಡಿದ ಕೂಲಿಕಾರರಿಗೆ ನಮ್ಮ ಪೂರ್ಣ ಸಹಾನುಭೂತಿ ಇದೆ' ಎಂದು ಒಂದು ಮೈಲುದ್ದ ಠರಾವು ಮಾಡುವರಲ್ಲದೆ ಹಸಿದು ಸಾಯುವ ನಮ್ಮ ಮಕ್ಕಳಿಗೆ ಒಂದು ಚಿಕ್ಕಾಸು ಕೂಡಾ ಕೊಡುವುದಿಲ್ಲ. ಧನಿಯವರದಾದರೂ ಮನಸ್ಸು ಕರಗುತ್ತದೋ ಎಂದು ಆಶೆ ಮಾಡಿದರೆ ಅದೂ ಇಲ್ಲ. ಹೆಂಡತಿ ನಮಗೆ ಸಹಾಯ ಮಾಡುತ್ತಾಳೆ ಅಂತ ಅವಳನ್ನೇ ಓಡಿಸಿ ಬಿಟ್ಟಿದ್ದಾರಂತೆ ಅವರು. ನಮಗೆ ಸಾಕಪ್ಪಾ ಈ ಮುಷ್ಕರ. ನಮ್ಮ ಹಣೆಯಲ್ಲಿ ಬರೆದಷ್ಟು ನಮಗೆ ಸಿಕ್ಕುತ್ತದೆ. ಸುಮ್ಮನೆ ದೊಡ್ಡವರ ಹತ್ತಿರ ಲಡಾಯಿ ಮಾಡಿ ಏನು ಉಪಯೋಗ?

**ರಂಗ**:— ಹಾಗೆ ಮಾತಾಡಬೇಡ ಸಿದ್ದ. ಜೈಲಿಗೊಯ್ಯುವಾಗ ಲಕ್ಷ್ಮಣ-ಸುದರ್ಶನರು ಹೇಳಿದ ಸಂದೇಶವನ್ನು ಮುರಿಯಬೇಡ. ಇನ್ನು ಸ್ವಲ್ಪ ದಿವಸ ನಾವು ಗಟ್ಟಿ ನಿಂತರೆ ರಾಯರು ರಾಜಿಗೆ ಬಂದೇ ಬರುತ್ತಾರಂತ ಸುದರ್ಶನನು ಇಂದೇ ಹೇಳುತ್ತಿದ್ದ.

**ಸಿದ್ದ**:— ಸ್ವಲ್ಪ ದಿವಸ ನಿಂತರೆ ರಾಜಿಗೆ ಬರುವುದು ಯಮ. ಲಕ್ಷ್ಮಣ— ಸುದರ್ಶನರಿಗೆ ಸ್ವಲ್ಪ ಇಂಗ್ಲಿಷ್ ಕಲಿತು ತಲೆ ಕೆಟ್ಟು ಹೋಗಿದೆ. ಸಾಯುವುದಾದರೆ ಆ ರಾಯರನ್ನೂ ಮೆನೇಜರನನ್ನೂ ಕೊಂದಾದರೂ ಸಾಯೋಣ. ಉಪವಾಸ ಬಿದ್ದು ಸಾಯುವುದು ಯಾರಿಗೆ ಸಾಧ್ಯ?

**ರಂಗ**:— ನೀನೊಬ್ಬ ಕೆಲಸಕ್ಕೆ ಹೋದರೆ ಗಿರಣಿಯ ಬಾಗಿಲು ಪುನಹ ತೆರೆಯುತ್ತಾರೆಯೆ? ಒಬ್ಬನೇ ನಡೆಸುವಿಯಾ ಗಿರಣಿ?

**ಸಿದ್ದ**:— ಒಬ್ಬ ಯಾಕೆ? ಎಲ್ಲರೂ ಈ ಕೆಲಸಕ್ಕೆ ಹೋಗಲು ತಯಾರಿದ್ದಾರೆ. ಒಬ್ಬ ಹೋಗುವುದೇ ತಡ.

**ರಂಗ:**— ಏನು ಮಾಡುವುದಾದರೂ ಸುದರ್ಶನನೊಡನೆ ಕೇಳಿ ಮಾಡು. ಅವನು ಹೊರಗೆ ಬಂದಿರುವನು.

**ಸಿದ್ದ:**—(ಅಷ್ಟರಲ್ಲಿ ಸುದರ್ಶನನು ಆ ಕಡೆಗೆ ಬರುತ್ತಿರುವುದನ್ನು ನೋಡಿ) ಇದೋ! ಅವನೇ ಬಂದನು.

**ಸುದರ್ಶನ:**—(ಪ್ರವೇಶಿಸಿ) ಏನು ಗೆಳೆಯರೇ, ಏನು ಮಾಡುತ್ತಿರುವಿರಿ?

**ಸಿದ್ದ:**— ಮಾಡುವುದೇನಿಲ್ಲ. ನಾವು ನಾಳೆ ಕೆಲಸಕ್ಕೆ ಹೋಗುವೆವು. ಊಟವಿಲ್ಲದೆ ಮೂರು ದಿವಸವಾಯಿತು.

**ಸುದರ್ಶನ:**— ಸ್ವಲ್ಪ ಸೈರಿಸಿರಿ. ನಮಗೆ ವಿಜಯವು ದೂರಿಲ್ಲ.

**ಸಿದ್ದ:**— ಸಾಧ್ಯವೇ ಇಲ್ಲ. ನಾಳೆ ನಮಗೆ ಅಕ್ಕಿಯ ವ್ಯವಸ್ಥೆ ಮಾಡು. ಇಲ್ಲದಿದ್ದರೆ ಇನ್ನು ನಿಮ್ಮ ಮಾತು ಕೇಳುವ ಹಾಗಿಲ್ಲ. ನಿಮ್ಮ ಮಾತು ಕೇಳಿ, ಕೆಟ್ಟೆವು. ಇಂಗ್ಲಿಷ್ ಕಲಿತವರು ನೀವು ಯಾಕೆ ಬಂದಿರಪ್ಪಾ ಗಿರಣಿ ಕೆಲಸಕ್ಕೆ? ನಾಳೆ ಬೆಳಿಗ್ಗೆ ಅಕ್ಕಿ ಕೊಟ್ಟರಾಯಿತು ಇಲ್ಲದಿದ್ದರೆ ಕೆಲಸಕ್ಕೆ ಹೋಗುವುದು ಖಂಡಿತ.

(ಸಿದ್ದನೂ ಇತರ ಕೂಲಿಯವರೂ ಹೋಗುವರು)

**ಸುದರ್ಶನ:**— ಹಾಯ್! ಪರಿಸ್ಥಿತಿಯು ಹೇಗೆ ನಿಲ್ಲುವುದೋ ಕಾಣೆ. ಸಂಘದಲ್ಲಿ ದುಡ್ಡಿಲ್ಲ; ಅನ್ಯ ಸಹಾಯವು ಸಿಗುವಂತಿಲ್ಲ. ಎಷ್ಟೆಂದು ಧೈರ್ಯ ಹೇಳಲಿ ಅವರಿಗೆ. ಅಶಿಕ್ಷಿತರಾದ ಅವರು ಇಷ್ಟು ದಿನ ಸಹಿಸಿಕೊಂಡದ್ದೇ ಹೆಚ್ಚೆನ್ನಬೇಕು. ದೇವಾ! ನಮ್ಮ ಪ್ರಯತ್ನಗಳೆಲ್ಲಾ ನಿಷ್ಫಲವಾಗುವವೇ? ಲಕ್ಷ್ಮಣಾ, ನೀನು ಸೆರೆಯಲ್ಲಿ ಸಿಲುಕಿರುವೆ. ನನಗೆ ದಿಕ್ಕು ಕಾಣುವುದಿಲ್ಲ. ಬಡವರ ರಕ್ತ ಹೀರುವುದರಲ್ಲಿ ತೋರಿಸುವ ಕಾಠಿಣ್ಯವನ್ನು ಜಗಜೀವನನು ಒಂದು ಸತ್ಕಾರ್ಯದಲ್ಲಿ ತೋರಿಸುತ್ತಿದ್ದರೆ ದೇಶ ಕಲ್ಯಾಣವಾಗುತ್ತಿತ್ತು. (ಚಿಂತಿಸಿ) ಮುಕ್ತಾಬಾಯಿಯವರು ಇಂದು ಕೊನೆಯ ಪ್ರಯತ್ನ ಮಾಡುವೆನಾಗಿ ಹೇಳಿರುವರು. ಅದೇನಾಗುವುದೊ? ಪರಮಾತ್ಮಾ! ನೀನೆ ನಮಗೆ ದಾರಿ ತೋರಿಸು.

(ಹೋಗುವನು)

---

## ೨. ಜಗಜೀವನರಾಯರ ದಿವಾಣಖಾನೆ.

(ರಾಯರು ಆಲೋಚನಾಪರರಾಗಿ ಕುಳಿತಿರುವರು)

**ಜಗಜೀವನ:**—ನಿನ್ನೆ ಕೂಲಿಯುವರ ಗುಡಿಸಲುಗಳ ಬಳಿ ಹೋದಾಗ ಕೇಳಿದ ಗೋಳು ನನ್ನ ಮನಸ್ಸಿನಲ್ಲಿ ಇನ್ನೂ ಪ್ರತಿಧ್ವನಿ ಕೊಡುತ್ತಿರುವುದು. ಕಾಲೇಜಿನಲ್ಲಿದ್ದಾಗ 'ಡಿಬೇಟಿಂಗ್ ಯೂನಿಯನಿ'ನ ಮೀಟಿಂಗುಗಳಲ್ಲಿ ಇಂಥಾ ಸ್ಥಿತಿಯನ್ನು ವರ್ಣಿಸಿದ್ದೆನು. ಆದರೆ; ಈ ತನಕ ಸ್ವತಹ ಕಂಡಿರಲಿಲ್ಲ. ವಿಚಾರ ಮಾತ್ರದಿಂದ ಕರಗುತ್ತಿದ್ದ ನನ್ನ ಮನಸ್ಸು ಈಗ ಪ್ರತ್ಯಕ್ಷ ದರ್ಶನದಿಂದಲೂ ಬದಲಾಗುವುದಿಲ್ಲ. (ತುಸು ವಿಚಾರ ಮಗ್ನನಾಗಿ) ಛೀ ನನ್ನ ಸಂಸಾರ ನೌಕೆಯು ಯಾವ ಪಥದಲ್ಲಿ ಸಾಗಿದೆ? ಮುಕ್ತೆಯ ಪ್ರೇಮದಿಂದ ಸಮಾಜ ಹಿತದ ಧ್ಯೇಯವನ್ನು ಮೂಲೆಗೊತ್ತಿ ಧನ ಸಂಗ್ರಹವನ್ನೇ ಸರ್ವಸ್ವವಾಗಿಟ್ಟುಕೊಂಡ ನಾನು ಇಂದು ಆ ಪ್ರೇಮವನ್ನೇ ನಿರಾಕರಿಸಿದೆನಲ್ಲಾ. ಪ್ರೇಮದಿಂದ ಪ್ರೇರಿತವಾದ ಧನದಾಸೆಯು, ತನಗೆ ಪ್ರೇಮವು ಅದನ್ನೇ ವಿರೋಧವಾದಾಗ ಹೊರತಳ್ಳಿ ಪ್ರೇಮಕ್ಕಿಂತಲೂ ಬಲವಾದ ಸ್ಥಾನವನ್ನು ಪಡೆಯಿತಲ್ಲಾ.

ಈ ರೀತಿಯ ಜೀವನವು ತಿರಸ್ಕರಣೀಯವು, ನನ್ನ ಧ್ಯೇಯ, ಮುಕ್ತೆಯ ಪ್ರೇಮ ಎರಡೂ ಮಿಲನವಾದ ಜೀವನ ಕ್ರಮವೇ ಸುಖಕರವು. ಅಲ್ಲದೆ ಧನ ಪಿಶಾಚಿಯಾಗಿ ಅನ್ಯರ ಜೀವನ ಪಥವನ್ನು ಮೆಟ್ಟಿ ಹೋಗುವ ರಾಕ್ಷಸೀ ಮಹತ್ವಾಕಾಂಕ್ಷೆಯಲ್ಲ. (ಗೂಢ ಆಲೋಚನೆಯಲ್ಲಿ ಮಗ್ನನಾಗುವನು. ಬೇಡಿಕೆಗಳಿಂದ ಪತಿಯ ಮನಸ್ಸು ಪರಿವರ್ತನೆ ಹೊಂದದೆ ಇದ್ದುದರಿಂದ ಕೂಲಿಕಾರರ ಪ್ರತ್ಯಕ್ಷ ಜೀವನವನ್ನು ಅವನಿಗೆ ತೋರಿಸಿ ಹ್ಯಾಗಾದರೂ ತನ್ನ ಕರ್ತವ್ಯ ಸಿದ್ಧಿಯಾಗುವುದೋ ಎಂಬ ಉದ್ದೇಶದಿಂದ ಮುಕ್ತೆಯು ಹರಕು ಚಿಂದಿಯನ್ನುಟ್ಟು, ಕೂದಲು ಬಾಚಿಕೊಳ್ಳದೆ ಭಿಕ್ಷುಕಿಯ ವೇಷದಿಂದ ಪ್ರವೇಶಿಸುವಳು. ಆಕೆಯ ಆಗಮನವು ರಾಯರ ಲಕ್ಷ್ಯಕ್ಕೆ ಹೋಗುವುದಿಲ್ಲ.)

**ಮುಕ್ತಾ:**—(ಮೆಲ್ಲನೆ) ನಾಥಾ!

**ಜಗಜೀವನ:**—(ತಲೆಯೆತ್ತಿ ನೋಡಿ) ಯಾರು! ಮುಕ್ತೆ!! ಮುಕ್ತಾ ಇದೇನು? ಏನಾದರೂ ಆಪತ್ತು ಸಂಭವಿಸಿತೇ? ಕೂದಲು ಬಾಚಲಿಲ್ಲ. ಹರಕು ಚಿಂದಿಯನ್ನು ಉಟ್ಟಿರುವೆ. ಹೇಳು; ಬೇಗನೆ ಹೇಳು.

(ಮುಕ್ತೆಯು ಅಳುತ್ತಾ ನಿಲ್ಲುವಳು)

**ಜಗಜೀವನ**:—(ಸಮೀಪಕ್ಕೆ ಬಂದು ಅವಳನ್ನು ತಬ್ಬಿಕೊಂಡು) ಮುಕ್ತಾ ಬೇಗನೆ ಹೇಳು. ಈ ಸ್ಥಿತಿಯಲ್ಲಿ ನಿನ್ನನ್ನು ನೋಡಲಾರೆನು.

**ಮುಕ್ತಾ**:—(ಅಳುತ್ತಾ) ಈ ಸ್ಥಿತಿಯಲ್ಲಿ ನನ್ನನ್ನು ನೋಡಲಾರೆನೆನ್ನುವುದು ಏಕೆ?

**ಜಗಜೀವನ**:— ಏಕೆಂದು ಕೇಳಬೇಕೆ? ನನ್ನ ಪ್ರಿಯತಮೆಯು ಹರಕು ಚಿಂದಿಯನ್ನುಟ್ಟು ಕೂದಲು ಬಾಚದೆ ಬಾಡಿದ ಪುಷ್ಪದಂತಿರುವುದನ್ನು ಹೇಗೆ ನೋಡಲಿ? ಮುಕ್ತಾ, ನೀನೇಕೆ! ಯಾವ ಸ್ತ್ರೀಯಾದರೂ ಇಂಥಾ ಸ್ಥಿತಿಯಲ್ಲಿ ಬಂದರೆ ಮನುಷ್ಯನೆಂದೆನ್ನಿಸಿಕೊಳ್ಳುವವನು ನೋಡಲಾರನು. ಮುಕ್ತಾ, ಹೇಳು. ತಡಮಾಡ ಬೇಡ. ನನ್ನ ಹೃದಯವು ತಲ್ಲಣಿಸುತ್ತದೆ.

**ಮುಕ್ತಾ**:— ಹೇಳಿ ಉಪಯೋಗವಿಲ್ಲ.

**ಜಗಜೀವನ**:— ಮುಕ್ತಾ, ಹಾಗೆನ್ನಬೇಡ. ನೀನು ಹೇಳಿದ್ದನ್ನು ಮಾಡುವೆನು ನನಗೆ ನಿನ್ನ ಈ ಸ್ಥಿತಿಯನ್ನು ನೋಡಿ ನಿಜವಾಗಿಯೂ ಒಂದು ತರದ ಭಯವಾಗುತ್ತದೆ.

**ಮುಕ್ತಾ**:—(ಉಕ್ಕಿ ಬರುವ ದುಃಖದೊಡನೆ) ನಾಥಾ,

ಪೀಲು-ತ್ರಿತಾಲ್

**ಮುಕ್ತಾ**:—ದೀನಜನರಾ ಪಾಲಿಸುವೆಯಾ ।
ಪ್ರಾಣಕಾಂತಾ । ಮೊರೆಯ ಕೇಳೊ ॥
ಬಡತನದಿ-ಗೋಳಿಡುವ ಜನರಾ ।
ಒಡ ಜನಿಸಿದವರೆಂದು ನೋಡೊ ॥
ಮಾನವ ಸ । ಹೋದರರನು ಸಲಹುವ ।
ಜ್ಞಾನಯುತನಾಗುವೆಯ-ನಾಥಾ ॥

ನನ್ನ ಈ ಹರಿದ ಸೀರೆ, ಬಿಚ್ಚಿದ ಕೂದಲು ನಿಮಗೆ ಅಸಹನೀಯವಾಗಿದೆ ಎನ್ನುತ್ತೀರಿ. ಆದರೆ ನಿಮ್ಮ ಕಠೋರತನದಿಂದಾಗಿ ನಿಮ್ಮ ಮಕ್ಕಳಂತಿರುವ ಕೂಲಿಕಾರ ಸ್ತ್ರೀಯರು ಉಡಲು ಬಟ್ಟೆಯಿಲ್ಲದೆ ತಲೆಗೆ ಎಣ್ಣೆ ಇಲ್ಲದೆ ಮೂರು ನಾಲ್ಕು ದಿನಗಳಿಂದ ಒಂದು ಅನ್ನದ ಅಗುಳೂ ಇಲ್ಲದೆ

ಸಂಕಟ ಪಡುತ್ತಿರುವುದು ನಿಮಗೆ ಸಹನವಾಗುತ್ತಿದೆಯೆ? ನಾನು ಓರ್ವ ಹೆಂಗುಸು ಹೇಳುತ್ತಿರುವೆನೆಂದು ತಿರಸ್ಕರಿಸಬೇಡಿರಿ. ವಿಚಾರ ಮಾಡಿರಿ; ನಿಮ್ಮ ಪ್ರಿಯ ಪತ್ನಿಗಾಗಿ ಮೇರುಪರ್ವತವನ್ನಾದರೂ ತರುವ ಸಾಹಸಕ್ಕೆ ಕೈಹಾಕುವಿರಿ. ಆದರೆ, ನಿಮಗಾಗಿ ದುಡಿದು ನಿಮಗೆ ಸುಖ ಒದಗಿಸಿ ಕೊಡುವ ಕೂಲೀ ಬಂಧುಗಳ ದುಃಖಶಮನ ಮಾಡಲಾರಿರಿ. ನನಗಾಗಿ ಸಾವಿರ ರೂಪಾಯಿಯ ಸೀರೆಯನ್ನಾದರೂ ತರುವ ನೀವು, ನಿಮ್ಮ ಗಿರಣಿಯ ಕೂಲಿ ಸ್ತ್ರೀಯರು ಹರಿಯದ ಸೀರೆ ಉಡುವುದಕ್ಕಾಗಿ ತಿಂಗಳಿಗೆ ಒಂದು ರೂಪಾಯಿಯನ್ನು ಏರಿಸಲಾರಿರಿ. ನಿಮ್ಮ ಪತ್ನಿಯಾದರೂ ನಾನೂ ಓರ್ವ ಸ್ತ್ರೀ. ನಮ್ಮನ್ನು ಸುಖೋಪಭೋಗದಲ್ಲಿಡುವ ಕೂಲಿಯವರು ಸದಾ ಬಡತನದಲ್ಲಿ ಗೋಳಿಡಬೇಕೇ? ಹರಕು ಸೀರೆಯನ್ನುಟ್ಟು ನನ್ನನ್ನು ನೋಡಲಾರದ ನೀವು ಸಾವಿರಾರು ಕೂಲಿಯವರನ್ನು ಮನಸ್ಸಿಗೆ ಏನೊಂದೂ ವ್ಯಥೆಯಿಲ್ಲದೆ ನೋಡುವಿರಲ್ಲಾ-ನಾಥಾ-ಬಡವರ ಮೊರೆಯನ್ನು ಕೇಳಿರಿ. ನಿಮ್ಮ ಪ್ರಿಯತಮೆಯಾದ ಮುಕ್ತೆಯು ಬಡವರ ಪ್ರಾಣದಾನವನ್ನು ಬೇಡುವಳು. (ಕಾಲಿಗೆ ಬೀಳುವಳು)

**ಜಗಜೀವನ:**—(ಹೃದಯ ಪರಿವರ್ತನೆಯಾಗಿ ಕಣ್ಣೀರನ್ನು ಒರಸಿ) ಮುಕ್ತಾ ಹೇಳು. (ಕೈ ಹಿಡಿದೆಬ್ಬಿಸಿ) ನೀನು ನನ್ನ ಹೃದಯವನ್ನು ಮುಟ್ಟಿದೆ. ನಿನ್ನ ಪ್ರಯತ್ನವು ಸಫಲವಾಯಿತು. ಕೂಲಿಕಾರರು ಕೇಳುವ ಸವಲತ್ತುಗಳನ್ನು ನಾಳಿನಿಂದಲೇ ಕೊಡುವೆನು.

**ಮುಕ್ತಾ:**—(ಸಂತೋಷದಿಂದ ಆತನನ್ನು ಆಲಂಗಿಸಿ) ನಾಥಾ! ಇಂದು ನಾನು ಧನ್ಯಳಾದೆನು. ಪತಿಯನ್ನು ಸನ್ಮಾರ್ಗಕ್ಕೆ ತಿರುಗಿಸಿದ ಮಹದ್ಭಾಗ್ಯವು ನನ್ನದು. ನಿಮ್ಮಂಥ ಪತಿಯು ದೊರಕಿದ ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲ.

**ಜಗಜೀವನ:**—ಮುಕ್ತಾ, ನೀನು ಬೇಗನೇ ಹೋಗಿ ಸರಿಯಾದ ಸೀರೆಯನ್ನುಟ್ಟುಕೊಂಡು ಬಾ. ನಾನು ಬೇಗನೇ ಕಚೇರಿಗೆ ಹೋಗಿ ಲಕ್ಷ್ಮಣನನ್ನು ಬಿಡಿಸಿಕೊಂಡು ಬರುವೆನು.

(ಇಬ್ಬರೂ ಹೋಗುವರು)

---



ಜಗಜೀವನ: — ಮುಕ್ತಾ, ಬೇಗನೆ ಹೇಳು. ಈ ಸ್ಥಿತಿಯಲ್ಲಿ
ನಿನ್ನನ್ನು ನೋಡಲಾರೆನು.

## ೩. ಮಾರ್ಗ.

**(ಗಿರಣಿ ಮಾಲಕರಲ್ಲೊಬ್ಬನಾದ ಲತೀಫ್ ಖಾನನೂ, ಮೆನೇಜರು ಮಹೇಂದ್ರನೂ ಭೆಟ್ಟಿಯಾಗುವರು)**

**ಲತೀಫ್:**—ಏನು ಮಿಸ್ಟರ್ ಮಹೆಂದ್ರ ಬಾಬೂ, ಮುಷ್ಕರವು ಹೇಗೆ ಸಾಗಿದೆ? ಬೇಗನೇ ಮುಗಿಯುವುದರಲ್ಲಿದೆಯೇನು?

**ಮಹೇಂದ್ರ:**—ಮುಷ್ಕರವು ಮುಗಿಯಿತು.

**ಲತೀಫ್:**—ಶಹಭಾಸ್, ಬೋತ್ ಅಚ್ಛಾ; ನಮಗೆ ಮೊದಲೇ ಗೊತ್ತಿತ್ತು, ಜಗಜೀವನರಾಯರು ಆ ಕುನ್ನೀ ಮಕ್ಕಳಿಗೆ ಸೊಪ್ಪು ಹಾಕುವವರಲ್ಲಾ ಅಂತ. ಕೂಲಿಕಾರರ ಸೊಕ್ಕು ಪೂರಾ ಇಳಿದು ಹೋಯಿತೋ ಇಲ್ಲವೊ? ಆ ಲಕ್ಷ್ಮಣ-ಸುದರ್ಶನರನ್ನು ಎರಡು ವರ್ಷಕ್ಕೆ ಕಳಿಸುವ ಪ್ರಯತ್ನ ಮಾಡಿರಿ. ಮುಷ್ಕರದ ಮಾತು ಎತ್ತಬಾರದು ಇನ್ನು.

**ಮಹೇಂದ್ರ:**—ಅವರ ಮೇಲಿನ 'ಕೇಸು' ಹಿಂತೆಗೆಯಲ್ಪಟ್ಟಿದೆ. ಮತ್ತು ಕೂಲಿಕಾರರ ಶರ್ತಗಳಿಗೆಲ್ಲಾ ರಾಯರು ಒಪ್ಪಿರುವರು.

**ಲತೀಫ್:**—ಏನು ಮಿಸ್ಟರ್ ಮಹೇಂದ್ರ! ಚೇಷ್ಟೆ ಮಾತು ಆಡುತ್ತೀರೊ? ಜಗಜೀವನರಾಯರು ಕೂಲಿಕಾರರ ಶರ್ತಗಳಿಗೆ ಒಪ್ಪಿದರೆ? ಏನು ಸ್ವಾಮಿ, ಅವರ ವಿಷಯ ನಮಗೇನೂ ಗೊತ್ತಿಲ್ಲ ಅಂತ ಎಣಿಸಿದಿರಾ?

**ಮಹೇಂದ್ರ:**—ನನ್ನ ಮಾತಿನಲ್ಲಿ ಅನುಮಾನವಾದರೆ, ನೋಡಿ ಇದನ್ನು (ಕೂಲಿಕಾರರ ಶರ್ತಗಳಿಗೆ ರಾಯರು ಸಹಿ ಇತ್ತ ಪತ್ರವನ್ನು ಕೊಡುವನು)

**ಲತೀಫ್:**—(ಓದಿ) ಯಾ ಅಲ್ಲಾ! ಹೇ ಕ್ಯಾಭಾಯಿ! 'ಕೂಲಿಕಾರರಿಗೆ ಶೇಕಡಾ 50ರಷ್ಟು ಏರಿಸುವಿಕೆ. ಕಾಯಿಲೆಬಿದ್ದರೆ, ಹೆಂಗಸರು ಗರ್ಭಿಣಿಯರಾದರೆ ಅವರಿಗೆ ಎಡ್ವಾನ್ಸ್; ಕೂಲಿಯುವರ ಮಕ್ಕಳಿಗೆ ಶಾಲೆ, ಆಸ್ಪತ್ರೆ; ವಿದೇಶಿ ಸೂಲಿನ ಪೂರ್ಣ ಬಹಿಷ್ಕಾರ; ವಿದೇಶಿ ಅರಿವೆಯನ್ನು ಸ್ವದೇಶಿಯೆಂದು ಗಿರಣಿಯ ಛಾಪು ಹೊಡೆದು ಮಾರುವುದಕ್ಕೆ ಪೂರ್ಣ ನಿರ್ಬಂಧ.' ಏನು ಸ್ವಾಮಿಾ, ಪರದೇಶೀ ಅರಿವೆಯನ್ನು ಈ ರೀತಿ ಸ್ವದೇಶಿಯೆಂದು ಮಾರಲಿಕ್ಕೆ ನಮಗೆ ಜಗಜೀವನರಾಯರೇ ಹೇಳಿದ್ದರಲ್ಲಾ; ಕ್ಯಾ ಹುವಾ ಇಸ್ಕು?

**ಮಹೇಂದ್ರ:**—ನಿಮ್ಮ ಮೋಸವೆಲ್ಲಾ ಹೊರಗೆ ಬೀಳುತ್ತದೆ ಇನ್ನು. ಬೇಗನೇ ನಿಮ್ಮ ಗಿರಣಿಯಲ್ಲೂ ಕೂಲಿ ಏರಿಸಿರಿ. ಇಲ್ಲವಾದರೆ ಅಲ್ಲಿಯೂ ಮುಷ್ಕರವಾಗಿ ಇದೇ ಸ್ಥಿತಿಯಾದೀತು.

**ಲತೀಫ್:**-ನಾನೇನು ಜಗಜೀವನನಂತೆ ಹೆಂಡತಿ ಹೇಳಿದ ಹಾಗೆ ಕುಣಿಯುವವನೆ?

**ಮಹೇಂದ್ರ:**—ಅದಿರಲಿ. ಖಾನ್‌ಸಾಬ್, ರಾಯರು ಈ ತನಕ ನಿಮ್ಮ ಮುಂದಾಳಾಗಿದ್ದರು. ಅವರು ಕೂಲಿಕಾರರ ಕಡೆಗೆ ನಿಂತರೆ ನೀವೆಲ್ಲಾ ಬಗ್ಗಲೇ ಬೇಕು.

**ಲತೀಫ್:**—ಏನೊ. ಖುದಾಕಿ ಹುಕುಮುತ್. (ಹೋಗುವನು)

**ಮಹೇಂದ್ರ:**—ಒಟ್ಟಾರೆ ನಾನು ಕೆಟ್ಟೆ. ಧನಿಯ ಶಿಫಾರಸಿಗಾಗಿ ಮಾಡಬಾರದುದನ್ನೆಲ್ಲಾ ಮಾಡಿದೆ. ಎಲ್ಲಾ ಸಂಗ್ತಿ ತಿಳಿದರೆ ನನ್ನ ಮೇಲೆ ಬೀಳುತ್ತಾರೊ ಏನೊ. ದೊಡ್ಡವರಿಂದ ಶಿಫಾರಸು ಪಡಿಯಬೇಕೆಂತ ಎಂದೂ ಯತ್ನಿಸಬಾರದು ನೋಡಿ. ಈಗ ಕಲಿತೆ ನಾನು ಈ ಪಾಠ. ಅವರ ಮರ್ಜಿ ಇಂದು ಪೂರ್ವಕ್ಕೆ ಇದ್ದರೆ ನಾಳೆ ಪಶ್ಚಿಮಕ್ಕೆ. ಬೇಡಪ್ಪಾ ದೊಡ್ಡವರ ಮರ್ಜಿ ಹಿಡಿಯೊದು.

(ಹೋಗುವನು)

---

## ೪. ಜಗಜೀವನ ಗಿರಣಿಯ ಮುಂದಿನ ಗೇಟು.

(ವಿಶಾಲವಾದ ಮೈದಾನು. ಗಿರಣಿಯ ಸಮಸ್ತ ಕೂಲಿಕಾರರೂ ನೆರೆದಿರುವರು. ಎಲ್ಲರ ಮುಖದಲ್ಲೂ ಸಂತೋಷದ ಚಿಹ್ನೆ. ಮುಷ್ಕರವು ಅಂತ್ಯವಾಗಿ ಅವರ ಬೇಡಿಕೆಗಳಿಗೊಪ್ಪಿದ ಆ ಶುಭದಿನದ ಆಚರಣೆ. ಎಲ್ಲೆಲ್ಲೂ ವಿಜಯೋತ್ಸಾಹ. ಜಗಜೀವನರಾಯರೂ ಲಕ್ಷ್ಮಣನೂ ಪ್ರವೇಶಿಸುವರು)

**ಎಲ್ಲರೂ:**—(ಕೂಡಲೇ ಏಕಕಂಠವಾಗಿ) ಕೂಲಿಕಾರರ ಧುರೀಣನಿಗೆ ಜಯವಾಗಲಿ. (ಲಕ್ಷ್ಮಣನು ಎಲ್ಲರಿಗೂ ವಂದಿಸುವನು.)

**ಲಕ್ಷ್ಮಣ:**—(ಜಗಜೀವನನಿಗೆ ವಂದಿಸಿ) ಕೂಲಿಕಾರ ಭಾಂಡವಾಲಗಾರರೊಳಗೆ ಇರಬೇಕಾದ ಸಂಬಂಧವನ್ನು ಆಚರಣೆಯಲ್ಲಿ ತಂದುದಕ್ಕಾಗಿ

ಸಮಸ್ತ ಕೂಲಿಕಾರರ ಪರವಾಗಿ ನಾನು ನಿಮ್ಮನ್ನು ಹೃತ್ಪೂರ್ವಕವಾಗಿ ವಂದಿಸುತ್ತೇನೆ.

**ಜಗಜೀವನ:**— ಲಕ್ಷ್ಮಣಾ, ನಿನಗೂ ಸುದರ್ಶನನಿಗೂ ನಾನು ಕೆಲಸ ಕೊಟ್ಟಾಗ, ವಿದ್ಯೆ ಇದ್ದವರು ಗಿರಣಿಯ ಶಿಸ್ತನ್ನು ಕೆಡಿಸುವರೆಂದು ಹಲವರು ನನಗೆ ಬುದ್ಧಿ ಹೇಳಿದ್ದರು. ವಿದ್ಯಾವಂತರಿದ್ದರೆನೇ ಕೂಲಿಕಾರರ ಸ್ಥಿತಿಯು ಸುಧಾರಿಸುವುದೆಂದು ತಿಳಿದೇ ಇತರರ ಉಪದೇಶಕ್ಕೆ ಕಿವಿಕೊಡದೆ ನಾನು ನಿಮಗೆ ನೌಕರಿ ಕೊಟ್ಟೆನು. ಸಮತಾವಾದದ ತತ್ವಗಳನ್ನು ಸ್ವಲ್ಪ ಮಟ್ಟಿಗಾದರೂ ಆಚರಣೆಯಲ್ಲಿ ತರಬೇಕೆಂದು ನನ್ನ ಉದ್ದೇಶವಿತ್ತು. ಆದರೆ ಭಾಂಡವಾಲಗಾರರ ಐಶ್ವರ್ಯಕ್ಕೆ ಸ್ವಾಭಾವಿಕವಾದ ಸ್ವಾರ್ಥವು ನನ್ನ ಮನಸ್ಸನ್ನು ಆಕ್ರಮಿಸಿ ಉಚ್ಚ ಧ್ಯೇಯಗಳನ್ನೆಲ್ಲಾ ಮೂಲೆಗೊತ್ತಿತು. ನಿನ್ನ ಸತತ ಪ್ರಯತ್ನದ ಫಲವಾದ 'ನವಚೇತನ'ದಿಂದಾಗಿ ನನಗೆ ಮರೆತಿದ್ದ ಜನ್ಮದ ಧ್ಯೇಯವು ಪುನಃ ಸ್ಮರಣೆಗೆ ಬಂತು. ಕೂಲಿಕಾರರು ಕುಡಿಕತನವೇ ಮೊದಲಾದ ದುರಭ್ಯಾಸಗಳನ್ನು ವರ್ಜಿಸಿ ಸುಧಾರಣೆಗೆ ಯೋಗ್ಯರಾಗಲಿ.

(ಅಷ್ಟರಲ್ಲಿ ಮುಕ್ತಾಬಾಯಿಯು ಪ್ರವೇಶಿಸಿ ಲಕ್ಷ್ಮಣನನ್ನು ನೋಡಿ ಸಂತೋಷದಿಂದ)

**ಮುಕ್ತಾ:**— ಲಕ್ಷ್ಮಣಾ ಕ್ಷೇಮವೆ?

**ಲಕ್ಷ್ಮಣ:**—**(ಕೈ ಮುಗಿದು)** ತಮ್ಮ ಕೃಪೆಯಿಂದ ಸರ್ವರೂ ಕ್ಷೇಮದ ಹಾದಿಗೆ ಬಂದೆವು. ನಮ್ಮ ಸಂಕಷ್ಟಗಳು ತಮ್ಮವೆ ಎಂದು ತಿಳಿದು ನಮಗಾಗಿ ಅಪಾರ ಕಷ್ಟಗಳನ್ನು ಸಹಿಸಿದಿರಿ. ನಿಮ್ಮ ದಿವ್ಯ ಸ್ವಾರ್ಥತ್ಯಾಗದಿಂದ ಪತಿಯ ಮನಸ್ಸನ್ನು ತಿರುಗಿಸಿ ನಮಗೆ ಪ್ರಾಣದಾನ ಕೊಟ್ಟ ನೀವು ನಮ್ಮೆಲ್ಲರಿಗೆ ಮಾತೆಯಂತೆ ಪೂಜ್ಯರು. ನಿಮ್ಮ ಉಪಕಾರವನ್ನು ಸಮಸ್ತ ಕೂಲಿಬಾಂಧವರು ಎಂದೆಂದಿಗೂ ಮರೆಯುವವರಲ್ಲ.

**ಮುಕ್ತಾ:**— ನಾನು ನನ್ನ ಕರ್ತವ್ಯವನ್ನು ಮಾಡಿದೆ. ಅದೇನೂ ಅಷ್ಟೊಂದು ಹೆಚ್ಚಿನದಲ್ಲ, ಲಕ್ಷ್ಮಣಾ. **(ಗಂಡನ ಬಳಿಗೆ ಬಂದು)** ನಾಥಾ ಈ ಶುಭದಿನದ ಸ್ಮಾರಕವನ್ನು ಮಾಡುವುದು ಬೇಡವೇ?

**ಜಗಜೀವನ:**—ಕೂಲಿಕಾರರಲ್ಲಿ ಹುಟ್ಟಿದ 'ನವಚೇತನ'ದ ಸ್ಮಾರಕ ವಾಗಿ ಇಂದಿನಿಂದ ಈ ಗಿರಣಿಗೆ 'ನವಚೇತನ ಗಿರಣಿ'ಯೆಂದು ಹೆಸರಿಡು ವೆನು. ನವಚೇತನ ಗಿರಣಿಯಲ್ಲಿ ಕೂಲಿಕಾರ-ಭಾಂಡವಾಲಗಾರರ ಐಕ್ಯ ವನ್ನು ಸ್ಥಾಪಿಸೋಣ.

**ಮುಕ್ತಾ:**—ಪತಿಯ ಕೈ ಹಿಡಿದು

ಮೂಂಡ್ ಕಹೆರವಾ

ಭಾರತೀಯ ಭಾವೀ-ಸುಖದಾ ।
ಭಾಗ್ಯ ಭಾನುವಾ-ಕಿರಣಪ್ರಭಾ ॥
ಸತತದೇಶ ಹಿತಕರವಾದಾ ।
ಪತಿತ ಜನರ—ನವಚೇತನದಾ ॥
ಪಾವನತೆಯ—ನವಸಂದೇಶಾ ।
ಸೌಖ್ಯದಾಯಕಾ— ನಾಥಾ ॥

**॥ ವಂದೇ ಮಾತರಂ ॥**